ತಿಳಿಸತಕ್ಕದ್ದು ಮತ್ತು ಆಯುಕ್ತರು ಕಳುಹಿಸಿಕೊಟ್ಟ ಅಂಥ ವಿಷಯದ ಬಗ್ಗೆ ರಾಜ್ಯ ಸರ್ಕಾರವು ಆದೇಶವನ್ನು ನೀಡುವವರೆಗೆ, ಆಯುಕ್ತರು ಆ ನಿರ್ಣಯವನ್ನು ಜಾರಿಗೆ ತರಲು ಬದ್ಧರಲ್ಲ.

(5) ಪ್ರಾಧಿಕಾರವು, ವಿನಿಯಮಗಳ ಮೂಲಕ ತನ್ನ ಸಭೆಗಳ ಕಾರ್ಯಕಲಾಪಗಳಿಗೆ ಸಂಬಂಧಪಟ್ಟಂತೆ ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ನಿಯಮಗಳಿಗೆ ಅಸಂಗತವಾಗದಂತಹ ಕಾರ್ಯವಿಧಾನಗಳನ್ನು ಗೊತ್ತುಪಡಿಸಬಹುದು.

**15. ವ್ಯವಹರಣೆಗಳು ಸರಿಯಾದುವೆಂದು ಮತ್ತು ಊರ್ಜಿತವಾದವೆಂದು ಪೂರ್ವಭಾವನೆ ಮಾಡುವುದು.**- ಪ್ರಾಧಿಕಾರದ ಯಾವುದೇ ಕೃತ್ಯ ಅಥವಾ ವ್ಯವಹರಣೆಯು ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿದ್ದರೆ, ಅಧ್ಯಕ್ಷರಾಗಿ ಅಥವಾ ಸದಸ್ಯರಾಗಿ ಕಾರ್ಯನಿರ್ವಹಿಸುವ ಯಾವೊಬ್ಬ ವ್ಯಕ್ತಿಯ ಅನರ್ಹತೆ ಅಥವಾ ನೇಮಕಾತಿಯಲ್ಲಿನ ನ್ಯೂನತೆಯು, ಅಂಥ ಕೃತ್ಯ ಅಥವಾ ವ್ಯವಹರಣೆಯನ್ನು ದೂಷಿತಗೊಳಿಸುತ್ತದೆಯೆಂದು ಭಾವಿಸತಕ್ಕದ್ದಲ್ಲ.

**16. ಸುತ್ತೋಲೆಯ ಮೂಲಕ ಪ್ರಾಧಿಕಾರದ ತೀರ್ಮಾನಗಳನ್ನು ಸೂಚಿಸುವುದು.**- (1) ಅಧ್ಯಕ್ಷರು, ಯಾವುದೇ ಪ್ರಕರಣವನ್ನು ಪ್ರಾಧಿಕಾರದ ಒಂದು ಸಭೆಯಲ್ಲಿ ಚರ್ಚೆಗೆ ತರುವುದಕ್ಕೆ ಬದಲಾಗಿ, ನಿಯಮಿಸಲಾದ ನಮೂನೆಯಲ್ಲಿ ಒಂದು ಟಿಪ್ಪಣಿಯನ್ನು ಪ್ರಾಧಿಕಾರದ ಸದಸ್ಯರ ನಡುವೆ ಆ ಬಗ್ಗೆ ಅವರ ಅಭಿಪ್ರಾಯ ಕೋರಿ ಪರಿಚಲನೆ ಮಾಡಿಸಲು ನಿರ್ದೇಶಿಸಬಹುದು. ಹಾಗೆ ಪರಿಚಲನೆ ಮಾಡಲಾದ ಟಿಪ್ಪಣಿಯಲ್ಲಿರುವ ಪ್ರಸ್ತಾವವನ್ನು ಎಲ್ಲ ಸದಸ್ಯರು ಅವಿರೋಧವಾಗಿ ಅನುಮೋದಿಸಿದರೆ ಅದನ್ನು ಪ್ರಾಧಿಕಾರದ ಸಮ್ಮತಿಸೂಚಕ ನಿರ್ಣಯವೆಂಬುದಾಗಿ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಮುಂದಿನ ಕ್ರಮ ಕೈಗೊಳ್ಳತಕ್ಕದ್ದು. ಪ್ರಾಧಿಕಾರದ ತೀರ್ಮಾನಕ್ಕಾಗಿ ಪರಿಚಲನೆ ಮಾಡಲಾದ ಯಾವುದೇ ನಿರ್ದಿಷ್ಟ ವಿಷಯದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ವ್ಯಕ್ತವಾದರೆ ಆಯುಕ್ತರು, ಆ ವಿಷಯವನ್ನು, ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಆ ಬಗ್ಗೆ ರಾಜ್ಯಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

(2) (1)ನೇ ಉಪ-ಪ್ರಕರಣದ ಅಡಿಯಲ್ಲಿ ಅಭಿಪ್ರಾಯಕ್ಕಾಗಿ ಪರಿಚಲನೆ ಮಾಡಲಾದ ಪ್ರಕರಣಗಳ ಸಂದರ್ಭಗಳಲ್ಲಿ ಯಾವೊಬ್ಬ ಸದಸ್ಯರು ಟಿಪ್ಪಣಿಯಲ್ಲಿ ನಿರ್ದಿಷ್ಟಪಡಿಸಿರುವ ದಿನಾಂಕದೊಳಗೆ ತಮ್ಮ ಅಭಿಪ್ರಾಯವನ್ನು ತಿಳಿಸಲು ತಪ್ಪಿದರೆ, ಅಂಥ ಸದಸ್ಯರು ಸುತ್ತೋಲೆಯಾಗಿ ಕಳುಹಿಸಲಾದ ಆ ಟಿಪ್ಪಣಿಯಲ್ಲಿ ಒಳಗೊಂಡ ಪ್ರಸ್ತಾವವನ್ನು ಒಪ್ಪಿಕೊಂಡಿದ್ದಾರೆಂದು ಭಾವಿಸತಕ್ಕದ್ದು.

(3) 14ನೇ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಈ ಪ್ರಕರಣದ ಅಡಿಯಲ್ಲಿ ಪರಿಚಲನೆ ಮೂಲಕ ಕೈಗೊಂಡ, ಪ್ರಾಧಿಕಾರದ ತೀರ್ಮಾನಗಳಿಗೆ ಅನ್ವಯವಾಗತಕ್ಕದ್ದು.

**17. ಕೆಲವೊಂದು ತೀರ್ಮಾನಗಳನ್ನು ಕೈಗೊಳ್ಳಲು ಅಧ್ಯಕ್ಷರ ಅಧಿಕಾರ.**- (1) ಯಾವೊಂದು ವಿಷಯವು, 14ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕಾರದ ಸಭೆ ಕರೆಯಲು ಅಗತ್ಯಪಡಿಸುವಷ್ಟು ಅಥವಾ 16ನೇ ಪ್ರಕರಣದ ಅಡಿಯಲ್ಲಿ ಪರಿಚಲನೆಯ ಮೂಲಕ ಪ್ರಾಧಿಕಾರವು ತೀರ್ಮಾನಿಸುವವರೆಗೂ ಕಾಯಲು ಸಾಧ್ಯವಾಗದಷ್ಟು ತುರ್ತು ಸ್ವರೂಪದ್ದಾಗಿದೆಯೆಂದು ಅಥವಾ ವಿಷಯವು ಗಹನವಾದುದಲ್ಲವೆಂದು ಅಧ್ಯಕ್ಷರು ಅಭಿಪ್ರಾಯಪಟ್ಟಲ್ಲಿ, ತಾವು ಯುಕ್ತವೆಂದು ಭಾವಿಸುವಂಥ ಆದೇಶಗಳನ್ನು ಅವರು ನೀಡಬಹುದು ಮತ್ತು ಅದನ್ನು ಪ್ರಾಧಿಕಾರದ ತೀರ್ಮಾನಗಳ ರೀತಿಯಲ್ಲಿಯೇ ಅನುಷ್ಠಾನಗೊಳಿಸತಕ್ಕದ್ದು:

ಪರಂತು ಈ ಪ್ರಕರಣದ ಅಡಿಯಲ್ಲಿ ಅಧ್ಯಕ್ಷರು ಕೈಗೊಂಡ ಪ್ರತಿಯೊಂದು ತೀರ್ಮಾನವನ್ನು ಪ್ರಾಧಿಕಾರದ ಮುಂದೆ ಅದರ ಮುಂದಿನ ಸಭೆಯಲ್ಲಿ ಮಂಡಿಸತಕ್ಕದ್ದು.

## ಅಧ್ಯಾಯ – III

## ಕಾಗಿನೆಲೆಯ ಅಭಿವೃದ್ಧಿ ಮತ್ತು ನಿರ್ವಹಣೆ

**18. ಕಾಗಿನೆಲೆಯಲ್ಲಿಯ ಪರಂಪರೆಯ ತಾಣಗಳು.**- (1) ಯಾವುದೇ ಪದ್ಧತಿ, ಸಂಪ್ರದಾಯ, ರೂಢಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಸೃಜಿಸಲಾದ ಮತ್ತು ಅಸ್ತಿತ್ವದಲ್ಲಿರುವ ನ್ಯಾಸದ ನಿಬಂಧನೆಗಳಲ್ಲಿ ಏನೇ ಇದ್ದರೂ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಕಾಗಿನೆಲೆಯಲ್ಲಿರುವ ಎಲ್ಲಾ ಅಥವಾ ಯಾವುವೇ ಪರಂಪರೆಯ ತಾಣಗಳ ಸಂಪೂರ್ಣ ನಿಯಂತ್ರಣ, ಒಡೆತನ, ಆಡಳಿತ ವ್ಯವಸ್ಥೆ ಮತ್ತು ಮೇಲ್ವಿಚಾರಣೆಯನ್ನು ಈಗಾಗಲೇ ರಾಜ್ಯಸರ್ಕಾರದಲ್ಲಿ ಅದು ನಿಹಿತವಾಗಿರದಿದ್ದರೆ ರಾಜ್ಯಸರ್ಕಾರವು ಭೂಸ್ವಾಧೀನ ಅಧಿನಿಯಮ, 1894ಕ್ಕೆ (1894ರ ಕೇಂದ್ರ ಅಧಿನಿಯಮ 1) ಅನುಸಾರವಾಗಿ ಸ್ವಾಧೀನಪಡಿಸಿಕೊಳ್ಳತಕ್ಕದ್ದು ಮತ್ತು ಆ ತರುವಾಯ ರಾಜ್ಯಸರ್ಕಾರವು ಅಧಿಸೂಚಿಸಿದ ದಿನಾಂಕದಿಂದ ಅದು ಪ್ರಾಧಿಕಾರಕ್ಕೆ ವರ್ಗಾವಣೆಯಾಗತಕ್ಕದ್ದು:

ಪರಂತು, ಈ ಅಧಿನಿಯಮದ ಅಡಿಯಲ್ಲಿ ಸ್ವಾಧೀನಪಡಿಸಿಕೊಂಡ ಭೂಮಿಯನ್ನು ಭೂಸ್ವಾಧೀನ ಅಧಿನಿಯಮ, 1894ರ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

(2) ರಾಜ್ಯ ಸರ್ಕಾರವು, ತಾತ್ಕಾಲಿಕ ಉಪಬಂಧಗಳನ್ನು ಕಲ್ಪಿಸುವುದು ಅವಶ್ಯವೆಂದು ಭಾವಿಸಿದರೆ, ಅದು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ತಾತ್ಕಾಲಿಕ ಉಪಬಂಧಗಳನ್ನು ರಚಿಸಬಹುದು.

**19. ಅನುಸೂಚಿಯ ತಿದ್ದುಪಡಿಗೆ ಅಧಿಕಾರ.–** ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ನಿಯಮಿಸಬಹುದಾದಂಥ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ಅನುಸೂಚಿಯಲ್ಲಿ ಯಾವುದೇ ನಮೂದನ್ನು ಸೇರಿಸಿ ಅಥವಾ ಮಾರ್ಪಡಿಸಿ ಅದನ್ನು ತಿದ್ದುಪಡಿಮಾಡಬಹುದು.

**20. ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವುದು, ಅದರ ಅನುಮೋದನೆ ಹಾಗೂ ಅದನ್ನು ಕಾರ್ಯಗತ ಗೊಳಿಸುವುದು.–** (1) ಪ್ರಾಧಿಕಾರವು, ಅದರ ರಚನೆಯಾದ ಮೇಲೆ, ಆದಷ್ಟು ಬೇಗನೆ ಕಾಗಿನೆಲೆಯನ್ನು ಅಂತಾರಾಷ್ಟ್ರೀಯ ಯಾತ್ರಾ ಸ್ಥಳವನ್ನಾಗಿ ಮತ್ತು ಸಾಂಸ್ಕೃತಿಕ ಹಾಗೂ ಪ್ರವಾಸಿ ಕೇಂದ್ರವನ್ನಾಗಿ ಮತ್ತು ಸಂತಕವಿ ಕನಕದಾಸರು, ಅವರ ಸಮಕಾಲೀನರು ಮತ್ತು ಶಿಷ್ಯರ ಸಿದ್ಧಾಂತ ಚಿಂತನೆಗಳ ವೈಚಾರಿಕ ಹಾಗೂ ಪ್ರಚಾರದ ಕೇಂದ್ರವನ್ನಾಗಿ ಮಾಡಿ ಅಭಿವೃದ್ಧಿಗೊಳಿಸಲು ಯೋಜನೆಯನ್ನು ಸಿದ್ಧಪಡಿಸತಕ್ಕದ್ದು. ಅಭಿವೃದ್ಧಿ ಯೋಜನೆಯು ಈ ಮುಂದಿನವುಗಳನ್ನು ಒಳಗೊಂಡಿರಬಹುದು, ಎಂದರೆ:–

(ಎ) ಯಾವುದೇ ಪರಂಪರೆ ತಾಣದ ಅಥವಾ ಕಟ್ಟಡಗಳ ಸಂರಕ್ಷಣೆ ಮತ್ತು ಅದರ ಜೀರ್ಣೋದ್ಧಾರಕ್ಕಾಗಿ ಕಾರ್ಯಕ್ರಮಗಳು;

(ಬಿ) ಪ್ರಾಧಿಕಾರದ ಅಭಿಪ್ರಾಯದಲ್ಲಿ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸಲು ಅವಶ್ಯವಾದ ಭೂಮಿಯನ್ನು, ಭೂಸ್ವಾಧೀನ ಅಥವಾ ಖರೀದಿ ಅಥವಾ ವಿನಿಮಯದ ಮೂಲಕ ಅಥವಾ ಅನ್ಯಥಾ ಸ್ವಾಧೀನಪಡಿಸಿ ಕೊಳ್ಳುವುದಕ್ಕಾಗಿ ಪ್ರಸ್ತಾವಗಳು;

(ಸಿ) ಸಾರ್ವಜನಿಕ ಉದ್ಯಾನವನಗಳು, ಫಲಪುಷ್ಪ ತೋಟಗಳು ಅಥವಾ ಮೃಗಾಲಯಗಳು, ಕಾರಂಜಿಗಳು, ಕೃತಕ ಜಲಪಾತಗಳು, ವನ್ಯಮೃಗ ಉದ್ಯಾನವನಗಳು, ದೋಣಿ ವಿಹಾರ ಅಥವಾ ಇತರ ಜಲ ಕ್ರೀಡಾ ಸೌಲಭ್ಯವಿರುವ ಸರೋವರಗಳನ್ನು ಅಥವಾ ಇಂಥವೇ ಪ್ರವಾಸಿಗಳಿಗೆ ಆಕರ್ಷಣೆಯನ್ನುಂಟುಮಾಡುವಂಥ ಇತರ ಕೇಂದ್ರಗಳನ್ನು ನಿರ್ಮಿಸುವುದು;

(ಡಿ) ವಿವಿಧ ವರ್ಗದ ಪ್ರವಾಸಿಗರ ಅವಶ್ಯಕತೆ ಪೂರೈಸಲು ಛತ್ರಗಳು, ವಸತಿ–ಗೃಹಗಳು, ಕುಟೀರಗಳು, ಹೋಟೆಲುಗಳು, ರೆಸ್ಟೋರಾಗಳು ಮತ್ತು ಭೋಜನಾಲಯಗಳನ್ನು ನಿರ್ಮಿಸುವುದು;

(ಇ) ಅವಶ್ಯಕ ಸಾಲು ಅಂಗಡಿಗಳನ್ನು ಅಥವಾ ವಾಣಿಜ್ಯ–ಸಂಕೀರ್ಣಗಳನ್ನು ನಿರ್ಮಿಸುವುದು;

(ಎಫ್) ಅನುಭವ ಮಂಟಪದ ಮಾದರಿಯಲ್ಲಿ ಒಂದು ಸಭಾಂಗಣವನ್ನು ನಿರ್ಮಿಸುವುದು;

(ಜಿ) ಆಯಕಟ್ಟಿನ ಸ್ಥಳಗಳಲ್ಲಿ ಪ್ರಾರ್ಥನಾ ಮಂದಿರಗಳನ್ನು ಮತ್ತು ಧ್ಯಾನ ಮಂದಿರಗಳನ್ನು ನಿರ್ಮಿಸುವುದು;

(ಎಚ್) 2ನೇ ಪ್ರಕರಣದಲ್ಲಿ ಪರಿಭಾಷಿಸಲಾದಂತೆ ಸೌಕರ್ಯಗಳನ್ನು ಕಲ್ಪಿಸುವುದು;

(ಐ) ಕಟ್ಟಡಗಳ ನಿರ್ಮಾಣ ಹಾಗೂ ಪುನರ್–ನಿರ್ಮಾಣವೂ ಸೇರಿದಂತೆ ಎಲ್ಲಾ ಅಥವಾ ಯಾವುದೇ ಭೂಮಿಯ ವಿನ್ಯಾಸ ಮತ್ತು ಮರು ವಿನ್ಯಾಸ;

(ಜೆ) ಚರಂಡಿ ವ್ಯವಸ್ಥೆ, ವಿದ್ಯುಚ್ಛಕ್ತಿ ಮತ್ತು ನೀರು ಪೂರೈಕೆ ಮತ್ತು ನೈರ್ಮಲ್ಯ ವ್ಯವಸ್ಥೆಯನ್ನು ಒದಗಿಸುವುದು;

(ಕೆ) ಪ್ರಾಧಿಕಾರವು, ಸಾಧಾರಣವಾಗಿ ತನ್ನ ಯೋಜನಾ ಕಾರ್ಯಕ್ಕೆ ಅನುಕೂಲವಾಗುವಂತೆ ಮತ್ತು ಮುಖ್ಯವಾಗಿ ನೀರು ಉತ್ತಮವಾಗಿ ಹರಿಯುವ ವ್ಯವಸ್ಥೆಯನ್ನು ಒದಗಿಸಲು, ಯಾವುದೇ ಭೂಮಿಯನ್ನು ಎತ್ತರಿಸುವುದು ಸೂಕ್ತವೆಂದು ಭಾವಿಸಿದರೆ ಅಂಥ ಭೂಮಿಯನ್ನು ಎತ್ತರಿಸುವುದು;

(ಎಲ್) ಕಾಗಿನೆಲೆಯಲ್ಲಿ ಅಥವಾ ಅದಕ್ಕೆ ಹೊಂದಿಕೊಂಡಂತಿರುವ ಪ್ರದೇಶದಲ್ಲಿ ಉತ್ತಮ ಗಾಳಿ–ಬೆಳಕು ದೊರಕುವಂತೆ ಖಾಲಿ ಜಾಗಗಳನ್ನು ಬಿಡುವುದು;

(ಎಮ್) ಜನರ ವಾಸಕ್ಕೆ ಯೋಗ್ಯವಲ್ಲದ ಹಾಗೂ ಅಭಿವೃದ್ಧಿ ಯೋಜನೆಗೆ ತಕ್ಕದಲ್ಲದ ಎಲ್ಲ ಕಟ್ಟಡಗಳನ್ನು ಕೆಡವುವುದು;

(ಎನ್) ಅಡಚಣೆಯನ್ನುಂಟುಮಾಡುವ ಕಟ್ಟಡಗಳನ್ನು ಅಥವಾ ಕಟ್ಟಡಗಳ ಭಾಗಗಳನ್ನು ಕೆಡವುವುದು;

(ಒ) ಕಟ್ಟಡಗಳ ನಿರ್ಮಾಣ ಮತ್ತು ಪುನರ್‌ನಿರ್ಮಾಣ, ಅವುಗಳನ್ನು ನಿರ್ವಹಿಸುವುದು ಮತ್ತು ಸಂರಕ್ಷಿಸುವುದು;

(ಪಿ) 26ನೇ ಪ್ರಕರಣದಲ್ಲಿನ ಉಪಬಂಧಗಳಿಗೆ ಒಳಪಟ್ಟು, ಯೋಜನೆಯಲ್ಲಿ ಸೇರಿರುವ ಯಾವುದೇ ಸ್ವತ್ತನ್ನು ಮಾರಾಟ ಮಾಡುವುದು, ಬಾಡಿಗೆಗೆ ಕೊಡುವುದು ಅಥವಾ ವಿನಿಮಯ ಮಾಡಿಕೊಳ್ಳುವುದು;

(ಕ್ಯೂ) ಪ್ರಾಧಿಕಾರದ ನೌಕರರಿಗೆ ವಸತಿ ಸೌಲಭ್ಯವನ್ನು ಒದಗಿಸುವುದು;

(ಆರ್) ಸಂಪರ್ಕ ಮತ್ತು ಸಾರಿಗೆ ಸೌಲಭ್ಯಗಳನ್ನು ಒದಗಿಸುವುದು;

(ಎಸ್) ಅಭಿವೃದ್ಧಿ ಯೋಜನೆಯ ಭೌಗೋಳಿಕ ಪ್ರದೇಶದಲ್ಲಿ ಈಗಿರುವ ಮತ್ತು ಮುಂದುವರಿಸಲು ಅನುಮತಿಸಬಹುದಾದಂಥ ಮತೀಯ ಸಂಸ್ಥೆಗಳೊಂದಿಗೆ, ಅವು ಅಭಿವೃದ್ಧಿ ಯೋಜನೆಯ ಪರಿಕಲ್ಪನೆಗೆ ಸರಿಹೊಂದುತ್ತಿರುವವರೆಗೆ ಹೊಂದಾಣಿಕೆಗಳು ಮತ್ತು ಒಪ್ಪಂದಗಳನ್ನು ಮಾಡಿಕೊಳ್ಳುವುದು;

(ಟಿ) ಕಾಗಿನೆಲೆಯನ್ನು ಸಾಂಸ್ಕೃತಿಕ ಕೇಂದ್ರವನ್ನಾಗಿ, ಯಾತ್ರಾಸ್ಥಳವನ್ನಾಗಿ ಮತ್ತು ಅಂತಾರಾಷ್ಟ್ರೀಯ ಪ್ರವಾಸಿ ಕೇಂದ್ರವನ್ನಾಗಿ ಮಾಡುವುದಕ್ಕಾಗಿ ಮತ್ತು ಸಂತ ಕವಿ ಕನಕದಾಸರ ಸಿದ್ಧಾಂತ ಚಿಂತನಗಳನ್ನು ಮಾತ್ರವಲ್ಲದೆ, ಅವರ ಸಮಕಾಲೀನರ ಹಾಗೂ ಶಿಷ್ಯರ ಸಿದ್ಧಾಂತ ಚಿಂತನಗಳ ವಿಚಾರ ಮಂಥನ ಮಾಡುವುದಕ್ಕಾಗಿ ಮತ್ತು ಸಂತ ಕವಿ ಕನಕದಾಸರ, ಅವರ ಸಮಕಾಲೀನರ ಮತ್ತು ಶಿಷ್ಯರ ಜೀವನ ಮತ್ತು ಬೋಧನೆಗಳಿಗೆ ಸಂಬಂಧಪಟ್ಟ ಇತರ ಮಹತ್ವದ ಸ್ಥಳಗಳ ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ ಹಾಗೂ ದಾಸ ಸಾಹಿತ್ಯದ ಅಧ್ಯಯನಕ್ಕಾಗಿ ಶೈಕ್ಷಣಿಕ ಮತ್ತು ಸಂಶೋಧನಾ ಕೇಂದ್ರದ ಮತ್ತು ಆ ವಿಷಯಕ್ಕೆ ಸಂಬಂಧಪಟ್ಟಂತೆ ವಿಶಿಷ್ಟ ಗ್ರಂಥಾಲಯದ ಸ್ಥಾಪನೆಗಾಗಿ, ಯುಕ್ತ ಹಾಗೂ ಆನುಷಂಗಿಕವೆಂದು ಪ್ರಾಧಿಕಾರವು ಅಭಿಪ್ರಾಯಪಡುವಂಥ ಇತರ ಯಾವುವೇ ವಿಷಯಗಳು;

(ಯು) ಪ್ರಾಧಿಕಾರದ ಪ್ರಾದೇಶಿಕ ಪರಿಮಿತಿಯೊಳಗಿನ ಐತಿಹಾಸಿಕ ಮತ್ತು ಪರಂಪರೆಯ ಯಾವುದೇ ಸ್ಥಳದಲ್ಲಿ ಮಣ್ಣಿನಲ್ಲಿ ಹೂತು ಹೋಗಿವೆ ಎಂದು ನಂಬಲಾದ ಪ್ರಾಚೀನ ಸ್ಮಾರಕಗಳು ಯಾವುವಾದರೂ ಇದ್ದರೆ ಅವನ್ನು ಭೂಮಿಯಿಂದ ಹೊರಗೆ ತೆಗೆಯುವುದಕ್ಕಾಗಿ ಉತ್ಖನನ ಮತ್ತು ಪುರಾತತ್ವ ಶಾಸ್ತ್ರ ಸ್ವರೂಪದ ಅನ್ವೇಷಣೆ:

ಪರಂತು, ಈ ಖಂಡದಲ್ಲಿ ಒಳಗೊಂಡಿರುವುದು ಯಾವುದೂ ಪ್ರಾಚೀನ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ, 1958ರ (1958ರ ಕೇಂದ್ರ ಅಧಿನಿಯಮ, 24) ಉಪಬಂಧಗಳನ್ನು ಅಧ್ಯಾರೋಹಿಸುತ್ತದೆಂದು ಭಾವಿಸತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದಡಿ ಸಿದ್ಧಪಡಿಸಲಾದ ಅಭಿವೃದ್ಧಿ ಯೋಜನೆಯನ್ನು ಆಯುಕ್ತರು ಅನುಮೋದನೆಗಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. ರಾಜ್ಯ ಸರ್ಕಾರವು, ಮಾರ್ಪಾಟುಗಳ ಸಹಿತವಾಗಿ ಅಥವಾ ಯಾವುವೇ ಮಾರ್ಪಾಟುಗಳಿಲ್ಲದೆ ಯೋಜನೆಯನ್ನು ಅನುಮೋದಿಸಬಹುದು.

(3) (2)ನೇ ಉಪ-ಪ್ರಕರಣದಡಿ ಅಭಿವೃದ್ಧಿ ಯೋಜನೆಯನ್ನು ಅನುಮೋದಿಸಿದ ತರುವಾಯ, ರಾಜ್ಯ ಸರ್ಕಾರವು ಪ್ರಾಧಿಕಾರದ ಶಿಫಾರಸುಗಳ ಮೇಲೆ ಕಾಲ ಕಾಲಕ್ಕೆ ತಾನು ಅವಶ್ಯವೆಂದು ಭಾವಿಸುವಂಥ ಮಾರ್ಪಾಟುಗಳನ್ನು ಯೋಜನೆಯಲ್ಲಿ ಮಾಡಬಹುದು.

(4) ಈ ಪ್ರಕರಣದಡಿ ರಾಜ್ಯ ಸರ್ಕಾರವು ಅನುಮೋದಿಸಿದ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಕಾಮಗಾರಿಗಳನ್ನು ಕೈಗೊಳ್ಳುವ ಮತ್ತು ವೆಚ್ಚವನ್ನು ಮಾಡುವ ಅಧಿಕಾರವನ್ನು ಪ್ರಾಧಿಕಾರವು ಹೊಂದಿರತಕ್ಕದ್ದು.

**21. ಕಾಗಿನೆಲೆಯ ನಿರ್ವಹಣೆ.-** ರಾಜ್ಯ ಸರ್ಕಾರವು ಪ್ರಾಧಿಕಾರದ ಶಿಫಾರಸ್ಸಿನ ಮೇಲೆ ಅಥವಾ ಅನ್ಯಥಾ, ಕಾಗಿನೆಲೆಯ ನಿರ್ವಹಣೆಗಾಗಿ ನಿಯಮಗಳು ಮೂಲಕ ಉಪಬಂಧಗಳನ್ನು ರಚಿಸತಕ್ಕದ್ದು, ಈ ಉಪಬಂಧಗಳಲ್ಲಿ ಅದರ ಪರಂಪರೆ ತಾಣಗಳೂ ಸೇರಿದಂತೆ ಪ್ರಾಧಿಕಾರದ ಸ್ವತ್ತನ್ನು ಬಳಸಿಕೊಳ್ಳಬಹುದಾದ ರೀತಿ, ಗ್ರಾಮಕ್ಕೆ ಬರುವ ಭಕ್ತರು, ಯಾತ್ರಿಕರು, ಪ್ರವಾಸಿಗರು ಮತ್ತು ಇತರ ಸಂದರ್ಶಕರು ಬಳಸಿಕೊಳ್ಳಬಹುದಾದ ವಿವಿಧ ಸೌಲಭ್ಯಗಳಿಗಾಗಿ ಅವರಿಂದ ವಸೂಲು ಮಾಡಬಹುದಾದ ದರಗಳು, ಶುಲ್ಕಗಳು ಅಥವಾ ಇತರ ವೆಚ್ಚಗಳು ಮತ್ತು ಪರಂಪರೆ ತಾಣಗಳ ಆವರಣಕ್ಕೆ ಸಂಬಂಧಿಸಿದ ಯುಕ್ತವಾದಂಥ ಇತರ ವಿಷಯಗಳು; ಭೂ ಕಂದಾಯದ ಬಾಕಿ ಎಂಬಂತೆ ಬಾಡಿಗೆ ಅಥವಾ ನಷ್ಟಪರಿಹಾರವನ್ನು ವಸೂಲು ಮಾಡುವ ಅಧಿಕಾರ ಮುಂತಾದ ಇತರ ವಿಷಯಗಳನ್ನು ಒಳಗೊಂಡಿರತಕ್ಕದ್ದು.

**22. ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರವು ಕಾಗಿನೆಲೆಗೆ ಒಂದು ಅಭಿವೃದ್ಧಿ ಪ್ರಾಧಿಕಾರ ಮತ್ತು ಗ್ರಾಮಪಂಚಾಯತಿ ಆಗಿರುವುದು.-** ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರಲ್ಲಿ (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಏನೇ ಇದ್ದರೂ ಪ್ರಾಧಿಕಾರದ ರಚನೆಯಾದ ದಿನಾಂಕದಂದು ಮತ್ತು ದಿನಾಂಕದಿಂದ, ಅದು ಕಾಗಿನೆಲೆಯ ಅಭಿವೃದ್ಧಿ ಪ್ರಾಧಿಕಾರ ಮತ್ತು ಗ್ರಾಮ ಪಂಚಾಯತಿ ಆಗಿರತಕ್ಕದ್ದು ಮತ್ತು ಪ್ರಾಧಿಕಾರವು, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರ (1993ರ ಕರ್ನಾಟಕ ಅಧಿನಿಯಮ 14) 4ನೇ ಪ್ರಕರಣದ ಅಡಿಯಲ್ಲಿ ಸದರಿ ಪ್ರಾಧಿಕಾರವು ರಚಿತವಾಗಿದ್ದರೆ ಹೇಗೋ ಹಾಗೆ ಗ್ರಾಮ ಪಂಚಾಯತಿಯ ಎಲ್ಲ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನೇರವೇರಿಸತಕ್ಕದ್ದು.

**23. ಪ್ರಾಧಿಕಾರದ ಅನುಮತಿ ಇಲ್ಲದೆ ಯಾವುದೇ ಇತರ ಪ್ರಾಧಿಕಾರ ಅಥವಾ ವ್ಯಕ್ತಿಯು ಅಭಿವೃದ್ಧಿಯನ್ನು ಕೈಗೊಳ್ಳಕೂಡದು.-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಪ್ರಾಧಿಕಾರದ ಪೂರ್ವಾನುಮತಿಯೊಂದಿಗೆ ಹೊರತು, ಕಾಗಿನೆಲೆಯೊಳಗೆ, ಪ್ರಾಧಿಕಾರವು ಕಾಲಕಾಲಕ್ಕೆ ಅಧಿಸೂಚನೆಯ ಮೂಲಕ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಮಾದರಿಗಳ ಯಾವುದೇ ಅಭಿವೃದ್ಧಿಯನ್ನು ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯು ಕೈಗೊಳ್ಳತಕ್ಕದ್ದಲ್ಲ.

(2) ಕಾಗಿನೆಲೆಯೊಳಗೆ, (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಅಭಿವೃದ್ಧಿ ಕೈಗೊಳ್ಳಲು, ಅಂಥ ಅಭಿವೃದ್ಧಿಗಾಗಿ ಪ್ರಾಧಿಕಾರವು ಅನುಮತಿಯನ್ನು ನೀಡಿದ್ದ ಹೊರತು, ಯಾವುದೇ ಸ್ಥಳೀಯ ಪ್ರಾಧಿಕಾರವು ಅನುಮತಿಯನ್ನು ನೀಡತಕ್ಕದ್ದಲ್ಲ.

(3) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ಅಭಿವೃದ್ಧಿಯನ್ನು ಕೈಗೊಳ್ಳಲು ಇಚ್ಛಿಸುವ ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯು ಅಂಥ ಅಭಿವೃದ್ಧಿಯನ್ನು ಕೈಗೊಳ್ಳಲು ಅನುಮತಿಯನ್ನು ಕೋರಿ ಲಿಖಿತ ಅರ್ಜಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(4) ಪ್ರಾಧಿಕಾರವು, ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ತಾನು ವಿಧಿಸುವುದು ಸೂಕ್ತವೆಂದು ಭಾವಿಸಬಹುದಾದಂಥ ಷರತ್ತುಗಳೊಡನೆ ಅಥವಾ ಷರತ್ತುಗಳಿಲ್ಲದೆ ಅಂಥ ಅನುಮತಿಯನ್ನು ನೀಡಬಹುದು ಅಥವಾ ಅಂಥ ಅನುಮತಿಯನ್ನು ನೀಡಲು ನಿರಾಕರಿಸಬಹುದು.

(5) (4)ನೇ ಉಪ ಪ್ರಕರಣದ ಅಡಿಯಲ್ಲಿಯ ಪ್ರಾಧಿಕಾರದ ತೀರ್ಮಾನದಿಂದ ಬಾಧಿತವಾದ ಯಾವುದೇ ಪ್ರಾಧಿಕಾರ ಅಥವಾ ವ್ಯಕ್ತಿಯು, ತೀರ್ಮಾನದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅಂಥ ತೀರ್ಮಾನದ ವಿರುದ್ಧ ರಾಜ್ಯ ಸರ್ಕಾರಕ್ಕೆ ಅಪೀಲನ್ನು ಸಲ್ಲಿಸಬಹುದು ಮತ್ತು ಆ ಬಗ್ಗೆ ರಾಜ್ಯಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು:

ಪರಂತು, ಅಂಥ ಅಪೀಲನ್ನು ಸಲ್ಲಿಸುವ ಬಾಧಿತ ಪ್ರಾಧಿಕಾರವು, ಕೇರದ್ರ ಸರ್ಕಾರದ ಆಡಳಿತ ನಿಯಂತ್ರಣದಲ್ಲಿದ್ದರೆ, ರಾಜ್ಯ ಸರ್ಕಾರವು ಕೇಂದ್ರ ಸರ್ಕಾರದೊಡನೆ ಸಮಾಲೋಚನೆ ನಡೆಸಿದ ತರುವಾಯ ಅಪೀಲನ್ನು ತೀರ್ಮಾನಿಸತಕ್ಕದ್ದು.

(6) ಯಾವೊಬ್ಬ ವ್ಯಕ್ತಿ ಅಥವಾ ಪ್ರಾಧಿಕಾರವು (5)ನೇ ಉಪ ಪ್ರಕರಣದಲ್ಲಿ ಮಾರ್ಪಡಿಸಲಾದಂತೆ (4)ನೇ ಉಪ ಪ್ರಕರಣದ ಅಡಿಯಲ್ಲಿ ನೀಡಿದ ತೀರ್ಮಾನಕ್ಕೆ ವಿರುದ್ಧವಾಗಿ ಯಾವುದೇ ಕಾರ್ಯವನ್ನು ಕೈಗೊಂಡಿದ್ದರೆ, ಅಂಥ ತೀರ್ಮಾನಕ್ಕೆ ವಿರುದ್ಧವಾಗಿ ಕೈಗೊಂಡ ಯಾವುದೇ ಅಭಿವೃದ್ಧಿಯನ್ನು ಕೆಡಹುವ, ನಾಶಪಡಿಸುವ ಅಥವಾ ತೆಗೆದುಹಾಕುವ ಅಧಿಕಾರವನ್ನು ಮತ್ತು ಅಂಥ ಕೆಡಹುವ, ನಾಶಪಡಿಸುವ ಅಥವಾ ತೆಗೆದುಹಾಕುವ ವೆಚ್ಚವನ್ನು ಸಂಬಂಧಪಟ್ಟ ವ್ಯಕ್ತಿಯಿಂದ ಅಥವಾ ಪ್ರಾಧಿಕಾರದಿಂದ ವಸೂಲ್ಮಾಡುವ ಅಧಿಕಾರವನ್ನು ಪ್ರಾಧಿಕಾರವು ಹೊಂದಿರತಕ್ಕದ್ದು.

**24. ಪ್ರವೇಶಕ್ಕೆ ಅಧಿಕಾರ.**- ಪ್ರಾಧಿಕಾರವು, ಯಾವುದೇ ಭೂಮಿ ಅಥವಾ ಕಟ್ಟಡವನ್ನು, ಕೆಲಸಗಾರರ ಸಹಾಯಪಡೆದು ಅಥವಾ ಸಹಾಯವನ್ನು ಪಡೆಯದೆ,

(ಎ) ಅಂಥ ಭೂಮಿ ಅಥವಾ ಕಟ್ಟಡಕ್ಕಾಗಿ ಯಾವುದೇ ವಿಚಾರಣೆ, ತಪಾಸಣೆ, ಅಳತೆ ಅಥವಾ ಸಮೀಕ್ಷೆ ಅಥವಾ ಮಟ್ಟ ತೆಗೆದುಕೊಳ್ಳುವ;

(ಬಿ) ನಿರ್ಮಾಣದಲ್ಲಿರುವ ಕಾಮಗಾರಿಗಳನ್ನು ಪರೀಕ್ಷಿಸುವ ಮತ್ತು ಒಳಚರಂಡಿ ಹಾಗೂ ಚರಂಡಿಗಳ ಮಾರ್ಗವನ್ನು ಖಚಿತಪಡಿಸಿಕೊಳ್ಳುವ;

(ಸಿ) ಕೆಳ ಮಣ್ಣಿನಲ್ಲಿ ತೋಡುವ ಅಥವಾ ಕೊರೆಯುವ;

(ಡಿ) ಕಾಮಗಾರಿಯ ಗಡಿಗಳನ್ನು ಮತ್ತು ಉದ್ದೇಶಿತ ರೇಖೆಗಳನ್ನು ಹಾಕುವ;

(ಇ) ಗುರುತುಗಳನ್ನು ಇರಿಸುವ ಹಾಗೂ ಕಂದಕಗಳನ್ನು ತೋಡುವ ಮೂಲಕ ಅಂಥ ಮಟ್ಟಗಳನ್ನು, ಗಡಿಗಳನ್ನು ಮತ್ತು ರೇಖೆಗಳನ್ನು ಹಾಕುವ;

(ಎಫ್) ಯಾವುದೇ ಯೋಜನೆಯನ್ನು ಉಲ್ಲಂಘಿಸಿ ಅಥವಾ ಯಾವ ಷರತ್ತುಗಳಿಗೆ ಒಳಪಟ್ಟು ಅಂಥ ಅನುಮತಿಯನ್ನು ನೀಡಲಾಗಿತ್ತೋ ಆ ಷರತ್ತುಗಳನ್ನು ಉಲ್ಲಂಘಿಸಿ ಯಾವುದೇ ಭೂಮಿಯನ್ನು ಅಭಿವೃದ್ಧಿಪಡಿಸಲಾಗುತ್ತಿದೆಯೇ ಅಥವಾ ಅಭಿವೃದ್ಧಿಪಡಿಸಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವ; ಅಥವಾ

(ಜಿ) ಈ ಅಧಿನಿಯಮದ ದಕ್ಷ ಆಡಳಿತಕ್ಕಾಗಿ ಅವಶ್ಯಕವಾದ ಇತರ ಯಾವುದೇ ಕಾರ್ಯಗಳನ್ನು ಮಾಡುವ,-

- ಉದ್ದೇಶಕ್ಕಾಗಿ ಪ್ರವೇಶಿಸಲು ಯಾವೊಬ್ಬ ವ್ಯಕ್ತಿಯನ್ನು ಪ್ರಾಧಿಕರಿಸಬಹುದು:

ಪರಂತು,

(i) ಸೂರ್ಯೋದಯ ಮತ್ತು ಸೂರ್ಯಾಸ್ತದೊಳಗಿನ ಅವಧಿಯ ಹೊರತಾಗಿ ಮತ್ತು ಅಧಿಭೋಗದಾರನಿಗೆ ಅಥವಾ ಅಲ್ಲಿ ಯಾವೊಬ್ಬ ಅಧಿಭೋಗದಾರನು ಇರದಿದ್ದರೆ ಭೂಮಿಯ ಅಥವಾ ಕಟ್ಟಡದ ಮಾಲೀಕನಿಗೆ ಸೂಕ್ತ ನೋಟೀಸನ್ನು ಕೊಡದೆ ಹಾಗೆ ಪ್ರವೇಶಿಸತಕ್ಕದ್ದಲ್ಲ;

(ii) ಮಹಿಳೆಯರು ಅಥವಾ ಮಕ್ಕಳು, ಯಾರಾದರೂ ಇದ್ದರೆ ಅವರು, ಅಂಥ ಭೂಮಿ ಅಥವಾ ಕಟ್ಟಡದಿಂದ ಹೊರ ಹೋಗಲು ಸಾಕಷ್ಟು ಅವಕಾಶವನ್ನು ಪ್ರತಿ ಸಂದರ್ಭದಲ್ಲಿಯೂ ನೀಡತಕ್ಕದ್ದು;

(iii) ಪ್ರವೇಶ ಮಾಡಿದ ಉದ್ದೇಶದ ಜರೂರು ಅವಶ್ಯಕತೆಗೆ ಸರಿಹೊಂದುವಷ್ಟರ ಮಟ್ಟಿಗೆ ಪ್ರವೇಶಿಸಿದ ಭೂಮಿ ಅಥವಾ ಕಟ್ಟಡದ ಅಧಿಭೋಗದಾರನ ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಗೆ ಯಾವಾಗಲೂ ಸೂಕ್ತ ಗೌರವ ನೀಡತಕ್ಕದ್ದು.

**25. ಶುಲ್ಕ ವಿಧಿಸುವುದು.**– 23ನೇ ಪ್ರಕರಣದ ಅಡಿಯಲ್ಲಿ ಅನುಮತಿಗಳ ನೀಡಿಕೆಗಾಗಿ ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ದರದಲ್ಲಿ ಶುಲ್ಕವನ್ನು ವಿಧಿಸುವುದು ಪ್ರಾಧಿಕಾರಕ್ಕೆ ಕಾನೂನುಬದ್ಧವಾಗಿರತಕ್ಕದ್ದು.

**26. ಪ್ರಾಧಿಕಾರಕ್ಕೆ ರಾಜ್ಯ ಸರ್ಕಾರದ ಅಧಿಕಾರಗಳ ಪ್ರತ್ಯಾಯೋಜನೆ.**– ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಹಾಗೂ ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ, 1961 ರಲ್ಲಿ (1962ರ ಕರ್ನಾಟಕ ಅಧಿನಿಯಮ ಸಂಖ್ಯೆ 7) ಏನೇ ಇದ್ದರೂ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ತಾನು ಚಲಾಯಿಸಬಹುದಾದ ಯಾವುವೇ ಅಧಿಕಾರಗಳನ್ನು ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಬಹುದು ಮತ್ತು ಅಂಥ ಅಧಿಸೂಚನೆಯನ್ನು ಹೊರಡಿಸಿದ ತರುವಾಯ ಪ್ರಾಧಿಕಾರವು ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**27. ಬೀದಿ ಮುಂತಾದವುಗಳ ನಿರ್ವಹಣೆಯ ಕರ್ತವ್ಯ.**– ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993 ರಲ್ಲಿ (1993ರ ಕರ್ನಾಟಕ ಅಧಿನಿಯಮ 14) ಏನೇ ಇದ್ದರೂ, ಈ ಮುಂದಿನ ವಿಷಯಗಳಿಗೆ ಸಂಬಂಧಿಸಿದಂತೆ ತಾನು ಕಾನೂನು ಬದ್ಧವಾಗಿ ಬಳಸಬಹುದಾದ ಯಾವುದೇ ಸಾಧನ ಅಥವಾ ತೆಗೆದುಕೊಳ್ಳಬಹುದಾದ ಯಾವುದೇ ಕ್ರಮದ ಮೂಲಕ ಸಮಂಜಸವಾದ ಮತ್ತು ಸಮರ್ಪಕವಾದ ಉಪಬಂಧಗಳನ್ನು ರಚಿಸುವುದು ಪ್ರಾಧಿಕಾರದ ಕರ್ತವ್ಯವಾಗಿರತಕ್ಕದ್ದು; ಎಂದರೆ:–

(ಎ) ಕಾಗಿನೆಲೆಯಲ್ಲಿ ಬೀದಿಗಳ ನಿರ್ವಹಣೆ, ದುರಸ್ತಿ ಮಾಡಿಸುವುದು, ದೀಪ ವ್ಯವಸ್ಥೆ ಮತ್ತು ಸ್ವಚ್ಛಗೊಳಿಸುವುದು; ಮತ್ತು

(ಬಿ) ಕಾಗಿನೆಲೆಯ ಬೀದಿಗಳ ಸಂಬಂಧದಲ್ಲಿ ಚರಂಡಿ, ನೈರ್ಮಲ್ಯ ವ್ಯವಸ್ಥೆ ಮತ್ತು ನೀರು ಸರಬರಾಜು.

**28. 1974ರ ಕರ್ನಾಟಕ ಅಧಿನಿಯಮ 32ನ್ನು ಪ್ರಾಧಿಕಾರದ ಆವರಣಗಳಿಗೆ ಅನ್ವಯಿಸುವುದು.**– (1) ರಾಜ್ಯ ಸರ್ಕಾರವು, (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಅಧಿಸೂಚನೆಯ ಮೂಲಕ, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ, ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ರ ಅಧಿನಿಯಮವು ಸಾರ್ವಜನಿಕ ಆವರಣಗಳಿಗೆ ಸಂಬಂಧಿಸಿ ಅನ್ವಯಿಸುವಂತೆ ಪ್ರಾಧಿಕಾರಕ್ಕೆ ಸೇರಿದ, ಅದರಲ್ಲಿ ನಿಹಿತವಾದ ಅಥವಾ ಅದು ಗುತ್ತಿಗೆಗೆ ತೆಗೆದುಕೊಂಡ ಆವರಣಕ್ಕೆ, ಅನ್ವಯಿಸತಕ್ಕದ್ದೆಂದು ಉಪಬಂಧ ಕಲ್ಪಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸಿದ ತರುವಾಯ, ಮೇಲ್ಕಂಡ ಅಧಿನಿಯಮವು ಮತ್ತು ಅದರಡಿ ರಚಿಸಿದ ನಿಯಮಗಳು ಈ ಮುಂದಿನ ಮಾರ್ಪಾಡುಗಳೊಡನೆ ಪ್ರಾಧಿಕಾರಕ್ಕೆ ಸೇರಿದ ಆವರಣಗಳಿಗೆ ಅನ್ವಯವಾಗತಕ್ಕದ್ದು, ಎಂದರೆ,–

(ಎ) ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಭಾವಿಸುವಂತೆ ರಾಜ್ಯ ಸರ್ಕಾರದ ಅಥವಾ ಪ್ರಾಧಿಕಾರದ ಒಬ್ಬ ಅಧಿಕಾರಿಯನ್ನು ಮೇಲ್ಕಂಡ ಅಧಿನಿಯಮದ ಉದ್ದೇಶಗಳಿಗಾಗಿ ಸಕ್ಷಮ ಅಧಿಕಾರಿ ಎಂದು ನೇಮಿಸಬಹುದು;

(ಬಿ) ಆ ಅಧಿನಿಯಮದಲ್ಲಿ ಮತ್ತು ಆ ನಿಯಮಗಳಲ್ಲಿ "ಸಾರ್ವಜನಿಕ ಆವರಣ" ಕ್ಕೆ ಮಾಡಿದ ಉಲ್ಲೇಖಗಳು ಪ್ರಾಧಿಕಾರದ ಆವರಣಗಳಿಗೆ ಮಾಡಿದ ಉಲ್ಲೇಖಗಳೆಂದು ಭಾವಿಸತಕ್ಕದ್ದು ಮತ್ತು ಆ ಅಧಿನಿಯಮದ 6, 7, 8, 14, 15, 16 ಮತ್ತು 17ನೇ ಪ್ರಕರಣಗಳಲ್ಲಿ "ರಾಜ್ಯ ಸರ್ಕಾರ" ಕ್ಕೆ ಮಾಡಿದ ಉಲ್ಲೇಖಗಳನ್ನು, ಪ್ರಾಧಿಕಾರಕ್ಕೆ ಮಾಡಿದ ಉಲ್ಲೇಖಗಳೆಂದು ಭಾವಿಸತಕ್ಕದ್ದು.

**29. ಪ್ರವಾಸೋದ್ಯಮಕ್ಕೆ ಮತ್ತು ಯಾತ್ರೆ ಕೈಗೊಳ್ಳುವುದಕ್ಕೆ ಪ್ರಾಧಿಕಾರವು ಉತ್ತೇಜಿಸುವುದು.**– ಈ ಪಾರಂಪರಿಕ ತಾಣಗಳಿಗೆ ಸಾಕಷ್ಟು ಪ್ರಚಾರವನ್ನು ನೀಡಲು ಸಾಂಸ್ಕೃತಿಕ, ಚಾರಿತ್ರಿಕ ಮತ್ತು ಯಾತ್ರಿಕ ಪ್ರವಾಸೋದ್ಯಮವನ್ನು ಉತ್ತೇಜಿಸುವುದಕ್ಕಾಗಿ ಪ್ರಾಧಿಕಾರವು ಕಾರ್ಯಕ್ರಮಗಳನ್ನು ಮತ್ತು ಕಾರ್ಯಚಟುವಟಿಕೆಗಳನ್ನು ವ್ಯವಸ್ಥೆ ಮಾಡಬಹುದು. ಅಂಥ ಕಾರ್ಯಕ್ರಮಗಳು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು:–

(ಎ) ಕನಕದಾಸರ ಜಯಂತಿ ಉತ್ಸವ

(ಬಿ) ದಾಸ ಸಾಹಿತ್ಯೋತ್ಸವ

(ಸಿ) ಕಲಾ ಪ್ರದರ್ಶನಗಳು ಮತ್ತು ಮಾರಾಟ

(ಡಿ) ಸಮ್ಮೇಳನಗಳು, ವಿಚಾರಗೋಷ್ಠಿಗಳು, ಕಾರ್ಯಾಗಾರಗಳು

(ಇ) ವಾರ್ಷಿಕ ಜಾತ್ರೆಗಳು ಮತ್ತು ವಿಶೇಷ ಸ್ವರೂಪದ ಹಬ್ಬಗಳು

**30. ಅಧಿಕಾರಗಳ ಪ್ರತ್ಯಾಯೋಜನೆ.-** (1) 45ನೇ ಪ್ರಕರಣದಡಿ ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಈ ಅಧ್ಯಾದೇಶದಡಿ ಅಥವಾ ಅಧ್ಯಾದೇಶದ ಮೂಲಕ ಅದಕ್ಕೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು, ಯಾವುದೇ ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಬಹುದು.

(2) 46ನೇ ಪ್ರಕರಣದಡಿಯ ವಿನಿಯಮ ರಚನಾಧಿಕಾರವನ್ನು ಹೊರತುಪಡಿಸಿ, ಪ್ರಾಧಿಕಾರವು ವಿನಿಯಮಗಳ ಮೂಲಕ, ಈ ಅಧ್ಯಾದೇಶದಡಿ ಅಥವಾ ಅಧ್ಯಾದೇಶದ ಮೂಲಕ ಅದಕ್ಕೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಆಯುಕ್ತರಿಗೆ ಅಥವಾ ಪ್ರಾಧಿಕಾರದ ಇತರ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಬಹುದು.

## ಅಧ್ಯಾಯ – IV

## ಹಣಕಾಸು ಮತ್ತು ಸ್ವತ್ತು

**31. ಪ್ರಾಧಿಕಾರದ ನಿಧಿ.-** (1) ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ನಿಧಿಯೆಂದು ಕರೆಯಲಾಗುವ ಒಂದು ನಿಧಿಯು ಇರತಕ್ಕದ್ದು.

(2) ಸದರಿ ನಿಧಿಗೆ,-

(೧) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಗಮಿತವಾದ ಇಲ್ಲವೇ ನಿಗಮಿತವಲ್ಲದ ಯಾವುದೇ ನಿಕಾಯ ಅಥವಾ ಯಾವೊಬ್ಬ ವ್ಯಕ್ತಿಯು ನೀಡಿದ ಎಲ್ಲ ಅನುದಾನಗಳು, ಧನ ಸಹಾಯ, ದೇಣಿಗೆಗಳು ಮತ್ತು ದಾನಗಳನ್ನು;

(೨) ಪ್ರಾಧಿಕಾರವು ಸಾಲ ಪಡೆದ ಮೊಬಲಗನ್ನು; ಮತ್ತು

(೩) ಯಾವುದೇ ಮೂಲದಿಂದಾಗಲೀ, ಪ್ರಾಧಿಕಾರವು ಅಥವಾ ಪ್ರಾಧಿಕಾರದ ಪರವಾಗಿ ಪಡೆದುಕೊಂಡ ಇತರ ಎಲ್ಲ ಮೊತ್ತಗಳನ್ನು,

-ಜಮೆ ಮಾಡತಕ್ಕದ್ದು.

(3) ರಾಜ್ಯ ಸರ್ಕಾರವು ಅನ್ಯಥಾ ನಿರ್ದೇಶಿಸಿದ ಹೊರತು, ನಿಧಿಗೆ ಜಮೆಮಾಡಲಾದ ಎಲ್ಲ ಹಣವನ್ನು ಯಾವುದೇ ಅನುಸೂಚಿತ ಬ್ಯಾಂಕಿನಲ್ಲಿ ಅಥವಾ ರಾಜ್ಯ ಸರ್ಕಾರದ ಖಜಾನೆಯಲ್ಲಿ ಇರಿಸತಕ್ಕದ್ದು.

(4) ಪ್ರಾಧಿಕಾರದ ಆಯುಕ್ತರಿಗೆ ಮತ್ತು ಇತರ ಅಧಿಕಾರಿಗಳಿಗೆ ಮತ್ತು ನೌಕರರಿಗೆ ಸಂದಾಯ ಮಾಡಬೇಕಾದ ವೇತನಗಳು ಮತ್ತು ಭತ್ಯೆಗಳು ಮತ್ತು ನಿವೃತ್ತಿವೇತನವೇನಾದರೂ ಇದ್ದಲ್ಲಿ, ಅದನ್ನೂ ಒಳಗೊಂಡಂತೆ ಪ್ರಾಧಿಕಾರದ ಆಡಳಿತಾತ್ಮಕ ವೆಚ್ಚಗಳನ್ನು ಪ್ರಾಧಿಕಾರದ ನಿಧಿಯಿಂದ ಭರಿಸತಕ್ಕದ್ದು.

**32. ನಿಧಿಯ ಬಳಕೆ.-** ನಿಧಿಯನ್ನು ಮತ್ತು ಪ್ರಾಧಿಕಾರವು ಹೊ0ದಿರುವ ಅಥವಾ ಅದರಲ್ಲಿ ನಿಹಿತವಾಗಿರುವ ಎಲ್ಲ ಸ್ವತ್ತನ್ನು ಈ ಅಧ್ಯಾದೇಶದ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಬಳಸಿಕೊಳ್ಳತಕ್ಕದ್ದು.

**33. ಸರ್ಕಾರದಿಂದ ಅನುದಾನ.-** ರಾಜ್ಯ ಸರ್ಕಾರವು ಪ್ರತಿ ವರ್ಷವೂ ಪ್ರಾಧಿಕಾರಕ್ಕೆ, ಪ್ರಾಧಿಕಾರವು ತನ್ನದೇ ಸಂಪನ್ಮೂಲಗಳಿಂದ ಸ್ವಯಂ ನಿರ್ವಹಣೆ ಮಾಡಿಕೊಳ್ಳುವ ಹಂತವನ್ನು ತಲುಪುವವರೆಗೆ, ಅದರ ಆಡಳಿತಾತ್ಮಕ ವೆಚ್ಚಗಳಿಗೆ ಸಮನಾದ ಮೊತ್ತವನ್ನು ಅನುದಾನದ ರೂಪದಲ್ಲಿ ನೀಡತಕ್ಕದ್ದು.

**34. ಪ್ರಾಧಿಕಾರದ ಆಯವ್ಯಯ.-** (1) ಪ್ರಾಧಿಕಾರವು, ಪ್ರತಿ ವರ್ಷವೂ ನಿಯಮಿಸಬಹುದಾದಂಥ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ, ಮುಂಬರುವ ಏಪ್ರಿಲ್ ಒಂದನೆಯ ದಿನಾಂಕದಂದು ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ತನ್ನ ಆದಾಯ ಮತ್ತು ವೆಚ್ಚದ ಆಯವ್ಯಯ ಅಂದಾಜನ್ನು ಸಿದ್ಧಪಡಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಮಂಜೂರಾತಿಗಾಗಿ ಕಳುಹಿಸತಕ್ಕದ್ದು. ಪ್ರಾಧಿಕಾರವು ಅವಶ್ಯವಾದರೆ, ಯಾವುದೇ ಹಣಕಾಸು ವರ್ಷದ ಅವಧಿಯಲ್ಲಿ ಪೂರಕ ಆಯವ್ಯಯ ಅಂದಾಜುಗಳನ್ನು ಸಹ ಸಿದ್ಧಪಡಿಸಬಹುದು.

(2) ರಾಜ್ಯ ಸರ್ಕಾರವು, ಈ ಆಯವ್ಯಯ ಅಂದಾಜುಗಳನ್ನು ಮತ್ತು ಪೂರಕ ಬಜೆಟ್ ಅಂದಾಜುಗಳನ್ನು, ಅವುಗಳಲ್ಲಿ ಮಾರ್ಪಾಟುಗಳನ್ನು ಮಾಡಿ ಅಥವಾ ಮಾಡದೆ ಅನುಮೋದಿಸತಕ್ಕದ್ದು.

(3) ಅತ್ಯಂತ ತುರ್ತು ಸಂದರ್ಭಗಳಲ್ಲಿ, ಆಯುಕ್ತರು ಒಂದು ಹಣಕಾಸು ವರ್ಷದಲ್ಲಿ ಐದು ಲಕ್ಷ ರೂಪಾಯಿಗಳಿಗೆ ಮೀರದಂತೆ ವೆಚ್ಚವನ್ನು, ಅಂಥ ವೆಚ್ಚವನ್ನು (2) ನೇ ಉಪ-ಪ್ರಕರಣದಡಿ ರಾಜ್ಯ ಸರ್ಕಾರವು ಅನುಮೋದಿಸಿದ ವಾರ್ಷಿಕ ಅಥವಾ ಪೂರಕ ಆಯವ್ಯಯ ಅಂದಾಜಿನಲ್ಲಿ ಸೇರಿಸಿಲ್ಲದಿದ್ದಾಗ್ಯೂ, ಮಾಡಲು ಸಕ್ಷಮರಾಗಿರತಕ್ಕದ್ದು.

(4) ಆಯುಕ್ತರು, ಒಂದು ಬಾರಿಗೆ, ಒಂದು ಲಕ್ಷ ರೂಪಾಯಿಗಳ ಗರಿಷ್ಠ ಮಿತಿಗೆ ಒಳಪಟ್ಟು, ವೆಚ್ಚದ ಒಂದು ಘಟಕದಿಂದ ಇನ್ನೊಂದು ಘಟಕಕ್ಕೆ ನಿಧಿಗಳ ಪುನರ್‌ವಿನಿಯೋಗ ಮಾಡುವ ಅಧಿಕಾರವನ್ನು ಹೊಂದಿರತಕ್ಕದ್ದು.

**35. ಲೆಕ್ಕ ಪತ್ರಗಳು ಮತ್ತು ಲೆಕ್ಕಪರಿಶೋಧನೆ.-** (1) ಆಯುಕ್ತರು, ನಿಯಮಿಸಬಹುದಾದಂಥ ಲೆಕ್ಕಪತ್ರಗಳ ಪುಸ್ತಕಗಳನ್ನು ಮತ್ತು ಇತರ ರಿಜಿಸ್ಟರುಗಳನ್ನು ನಿರ್ವಹಿಸಿಕೊಂಡು ಬರುವಂತೆ ಮಾಡತಕ್ಕದ್ದು ಮತ್ತು ನಿಯಮಿಸಲಾದ ವಿಧಾನದಲ್ಲಿ ವಾರ್ಷಿಕ ಲೆಕ್ಕಪತ್ರಗಳ ತಃಖ್ತೆಯನ್ನು ತಯಾರಿಸತಕ್ಕದ್ದು.

(2) ಪ್ರಾಧಿಕಾರದ ಹಣಕಾಸು ವರ್ಷವು ಪ್ರತಿ ಕ್ಯಾಲೆಂಡರ್ ವರ್ಷದ ಏಪ್ರಿಲ್ ಒಂದನೆಯ ದಿನಾಂಕದಂದು ಪ್ರಾರಂಭವಾಗತಕ್ಕದ್ದು ಮತ್ತು ಮುಂಬರುವ ಕ್ಯಾಲೆಂಡರ್ ವರ್ಷದ ಮಾರ್ಚಿ 31ನೇ ದಿನದಂದು ಕೊನೆಗೊಳ್ಳತಕ್ಕದ್ದು.

(3) ಪ್ರಾಧಿಕಾರದ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಣಾಧಿಕಾರಿಯು ವಾರ್ಷಿಕವಾಗಿ ಲೆಕ್ಕಪರಿಶೋಧನೆ ನಡೆಸತಕ್ಕದ್ದು. ಪ್ರಾಧಿಕಾರವು ಅಥವಾ ರಾಜ್ಯ ಸರ್ಕಾರವು ಸಮವರ್ತಿ ಮತ್ತು ವಿಶೇಷ ಲೆಕ್ಕಪರಿಶೋಧನೆಗಾಗಿಯೂ ಆದೇಶಿಸಬಹುದು.

(4) ಲೆಕ್ಕಪರಿಶೋಧಕನು, ಲೆಕ್ಕಪರಿಶೋಧನೆಯ ಉದ್ದೇಶಗಳಿಗಾಗಿ, ಪ್ರಾಧಿಕಾರದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನೋಡುವ ಅವಕಾಶವನ್ನು ಹೊಂದಿರತಕ್ಕದ್ದು.

(5) ಪ್ರಾಧಿಕಾರವು, ಲೆಕ್ಕಪತ್ರಗಳ ವಾರ್ಷಿಕ ತಃಖ್ತೆಯನ್ನು ಮತ್ತು ಲೆಕ್ಕಪರಿಶೋಧಕನ ವರದಿಯನ್ನು ಸ್ವೀಕರಿಸಿದ ತರುವಾಯ, ಸಾಧ್ಯವಾಗಬಹುದಾದಷ್ಟು ಬೇಗನೆ, ಅದನ್ನು ತನ್ನ ಸಭೆಯಲ್ಲಿ ಪರಿಶೀಲಿಸತಕ್ಕದ್ದು ಮತ್ತು ವಾರ್ಷಿಕ ಲೆಕ್ಕಪತ್ರಗಳ ತಃಖ್ತೆ ಹಾಗೂ ಲೆಕ್ಕಪರಿಶೋಧಕನ ವರದಿಯ ಪ್ರತಿಯನ್ನು, ಲೆಕ್ಕಪರಿಶೋಧಕನು ಮಾಡಿದ ಟೀಕೆಗಳೇನಾದರೂ ಇದ್ದಲ್ಲಿ, ಅದಕ್ಕೆ ನೀಡಿದ ತನ್ನ ವಿವರಣೆ ಮತ್ತು ಲೆಕ್ಕಪರಿಶೋಧಕನು ಸೂಚಿಸಿದ ಅಕ್ರಮತೆಗಳು ಅಥವಾ ಲೋಪದೋಷಗಳೇನಾದರೂ ಇದ್ದಲ್ಲಿ, ಅವುಗಳ ಪರಿಹಾರೋಪಾಯಕ್ಕಾಗಿ ಪ್ರಾಧಿಕಾರವು ಕೈಗೊಂಡ ಕ್ರಮದ ವಿವರಣೆಗಳ ಜೊತೆಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(6) ರಾಜ್ಯ ಸರ್ಕಾರವು, ಲೆಕ್ಕ ಪರಿಶೋಧಕನ ವರದಿಯನ್ನು ಮತ್ತು (5) ನೇ ಉಪ-ಪ್ರಕರಣದ ಅಡಿಯಲ್ಲಿ ತನಗೆ ಸಲ್ಲಿಸಲಾದ ಇತರ ದಸ್ತಾವೇಜುಗಳನ್ನು ಪರಿಶೀಲಿಸಿದ ನಂತರ, ಪ್ರಾಧಿಕಾರಕ್ಕೆ, ಅದು ಸೂಕ್ತವೆಂದು ಭಾವಿಸುವಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ಪ್ರಾಧಿಕಾರವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

**36. ವರದಿಗಳು.-** (1) ಪ್ರಾಧಿಕಾರವು, ಪ್ರತಿಯೊಂದು ಹಣಕಾಸು ವರ್ಷಕ್ಕಾಗಿ, ತನ್ನ ಕಾರ್ಯನಿರ್ವಹಣೆ ಬಗ್ಗೆ ವಾರ್ಷಿಕ ವರದಿಯೊಂದನ್ನು ತಯಾರಿಸತಕ್ಕದ್ದು ಮತ್ತು 35ನೇ ಪ್ರಕರಣದ ಅಡಿಯ ಇತರ ವರದಿಗಳೊಂದಿಗೆ ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ಪ್ರಾಧಿಕಾರವು, ನಿಯಮಿಸಬಹುದಾದಂಥ ದಿನಾಂಕಕ್ಕಿಂತ ಮೊದಲು, ಅಂಥ ನಮೂನೆಯಲ್ಲಿ ಮತ್ತು ಅಂಥ ಅವಧಿಯ ಅಂತರದಲ್ಲಿ, ನಿಯಮಿಸಲಾದ ವರದಿಗಳನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

## ಅಧ್ಯಾಯ – V

## ಸಂಕೀರ್ಣ ವಿಷಯಗಳು

**37. ಪ್ರಾಧಿಕಾರವು ತನ್ನ ಅಧಿಕಾರ ವ್ಯಾಪ್ತಿಯೊಳಗಿನ ಯಾವುದೇ ಜಮೀನನ್ನು ಮಾರಾಟ ಮಾಡಕೂಡದು.-** ಪ್ರಾಧಿಕಾರವು, ಸರ್ಕಾರದ ಪೂರ್ವಾನುಮೋದನೆ ಪಡೆಯದೆ, ಯಾವುದೇ ಉದ್ದೇಶಕ್ಕಾಗಿ ಮತ್ತು ಯಾವೊಬ್ಬ ವ್ಯಕ್ತಿಗೆ ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಯಾವುದೇ ಜಮೀನನ್ನು ಮಾರಾಟ ಮಾಡತಕ್ಕದ್ದಲ್ಲ.

**38. ಕೆಲವು ವ್ಯಕ್ತಿಗಳು ಸಾರ್ವಜನಿಕ ನೌಕರರಾಗಿರತಕ್ಕದ್ದು.-** ಪ್ರಾಧಿಕಾರದ ಎಲ್ಲ ಸದಸ್ಯರು, ಅಧಿಕಾರಿಗಳು ಮತ್ತು ನೌಕರರನ್ನು, ಅವರು ಈ ಅಧಿನಿಯಮದ ಯಾವುವೇ ಉಪಬಂಧಗಳ ಅನುಸರಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವಾಗ ಅಥವಾ ಕಾರ್ಯ ನಿರ್ವಹಿಸುತ್ತಿರುವರೆಂದು ತಾತ್ಪರ್ಯವಾದಾಗ ಅವರನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರು ಎಂಬುದಾಗಿ ಭಾವಿಸತಕ್ಕದ್ದು.

**39. ಈ ಅಧಿನಿಯಮದ ಅಡಿ ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.-** ಈ ಅಧಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕೃತ್ಯಕ್ಕಾಗಿ, ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರೆ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**40. ಕರ್ತವ್ಯ ನಿರ್ವಹಣೆಯಲ್ಲಿ ಲೋಪ.-** (1) ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ವಿಧಿಸಲಾದ ಯಾವುದೇ ಕರ್ತವ್ಯದ ನಿರ್ವಹಣೆಯನ್ನು ಪ್ರಾಧಿಕಾರವು ಮಾಡಿಲ್ಲ ಎಂದು ರಾಜ್ಯ ಸರ್ಕಾರಕ್ಕೆ ಮನವರಿಕೆಯಾದರೆ, ಆ ಕರ್ತವ್ಯದ ನಿರ್ವಹಣೆಗಾಗಿ ಅದು ಒಂದು ಅವಧಿಯನ್ನು ನಿಗದಿಪಡಿಸತಕ್ಕದ್ದು.

(2) ಕರ್ತವ್ಯ ನಿರ್ವಹಣೆಗಾಗಿ ಹಾಗೆ ನಿಗದಿಪಡಿಸಿದ ಅವಧಿಯೊಳಗೆ ಅಂಥ ಕರ್ತವ್ಯ ನಿರ್ವಹಣೆ ಮಾಡುವಲ್ಲಿ ಪ್ರಾಧಿಕಾರವು ವಿಫಲವಾಗಿದೆ ಅಥವಾ ನಿರ್ಲಕ್ಷ್ಯ ತೋರಿದೆ ಎಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ, 4ನೇ ಪ್ರಕರಣದಲ್ಲಿ ಏನೇ ಇದ್ದರೂ, ಪ್ರಾಧಿಕಾರವನ್ನು ರದ್ದುಗೊಳಿಸುವುದು ಮತ್ತು ಅದನ್ನು ನಿಗದಿತ ರೀತಿಯಲ್ಲಿ ಪುನಃ ರಚಿಸುವುದು ರಾಜ್ಯ ಸರ್ಕಾರಕ್ಕೆ ಕಾನೂನುಸಮ್ಮತವಾಗಿರತಕ್ಕದ್ದು.

(3) ಪ್ರಾಧಿಕಾರವನ್ನು ರದ್ದುಪಡಿಸಿದ ತರುವಾಯ ಮತ್ತು ಅದನ್ನು ಪುನಾರಚಿಸುವವರೆಗೆ ಈ ಅಧಿನಿಯಮದ ಅಡಿಯಲ್ಲಿನ ಪ್ರಾಧಿಕಾರದ ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ರಾಜ್ಯ ಸರ್ಕಾರ ಅಥವಾ ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂಥ ಅಧಿಕಾರಿ ಅಥವಾ ಅಧಿಕಾರಿಗಳು ನಿರ್ವಹಿಸತಕ್ಕದ್ದು.

**41. ಪ್ರಾಧಿಕಾರದ ವಿಘಟನೆ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ದಿನಾಂಕದಿಂದ ಜಾರಿಗೆ ಬರುವಂತೆ, ಪ್ರಾಧಿಕಾರವು ವಿಘಟಿತವಾಗತಕ್ಕದ್ದೆಂದು ಘೋಷಿಸಬಹುದು:

ಪರಂತು, ಅಂಥ ಯಾವುದೇ ಘೋಷಣೆಯನ್ನು, ಆ ಅಭಿಪ್ರಾಯದ ಒಂದು ನಿರ್ಣಯವನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸಿ ಅವುಗಳು ಅದನ್ನು ಅನುಮೋದಿಸಿದ ಹೊರತು, ರಾಜ್ಯ ಸರ್ಕಾರವು ಮಾಡತಕ್ಕದ್ದಲ್ಲ.

(2) (1)ನೇ ಉಪ-ಪ್ರಕರಣದ ಅಡಿಯಲ್ಲಿನ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಪರಿಣಾಮಕಾರಿಯಾಗುವಂತೆ,–

(ಎ) ಪ್ರಾಧಿಕಾರದಲ್ಲಿ ನಿಹಿತವಾದ ಮತ್ತು ಅದರಿಂದ ವಸೂಲಾಗತಕ್ಕ ಎಲ್ಲ ಸ್ವತ್ತುಗಳು, ನಿಧಿಗಳು ಮತ್ತು ಬಾಕಿಗಳು ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಮತ್ತು ಅದು ವಸೂಲಿ ಮಾಡಬಹುದಾಗಿರತಕ್ಕದ್ದು.

(ಬಿ) ಪ್ರಾಧಿಕಾರದ ವಿರುದ್ಧ ಜಾರಿಮಾಡಬಹುದಾದ ಎಲ್ಲ ಹೊಣೆಗಳು, ರಾಜ್ಯ ಸರ್ಕಾರದಲ್ಲಿ ನಿಹಿತವಾದ ಮತ್ತು ಅದರಿಂದ ವಸೂಲಿಯಾದ ಸ್ವತ್ತು, ನಿಧಿ ಮತ್ತು ಬಾಕಿಗಳಷ್ಟರ ಮಟ್ಟಿಗೆ ರಾಜ್ಯ ಸರ್ಕಾರದ ವಿರುದ್ಧ ಜಾರಿಯಾಗಬಹುದಾಗಿರತಕ್ಕದ್ದು.

**42. ರಾಜ್ಯ ಸರ್ಕಾರದ ನಿಯಂತ್ರಣ.–** (1) ಪ್ರಾಧಿಕಾರದ ಎಲ್ಲ ಕಾರ್ಯಚಟುವಟಿಕೆಗಳು ಮತ್ತು ವ್ಯವಹಾರಗಳ ಮೇಲೆ ರಾಜ್ಯ ಸರ್ಕಾರವು ಸಾಮಾನ್ಯ ಆಡಳಿತಾತ್ಮಕ ನಿಯಂತ್ರಣ ಮತ್ತು ಅಧೀಕ್ಷಣೆ ಹೊಂದಿರತಕ್ಕದ್ದು.

(2) ರಾಜ್ಯ ಸರ್ಕಾರವು, ಪ್ರಾಧಿಕಾರದ ಆಯುಕ್ತರ ಅಥವಾ ಪ್ರಾಧಿಕಾರದ ಅಧೀನದ ಯಾವೊಬ್ಬ ಅಧಿಕಾರಿಯ ಯಾವುವೇ ವ್ಯವಹರಣೆಗಳ ದಾಖಲೆಗಳನ್ನು, ಅಂಥ ವ್ಯವಹರಣೆಗಳ ಸರಿಯಾಗಿರುವಿಕೆ, ಕಾನೂನು ಬದ್ಧತೆ ಅಥವಾ ಔಚಿತ್ಯಗಳ ಬಗ್ಗೆ ತಾನು ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ತರಿಸಿಕೊಳ್ಳಬಹುದು ಮತ್ತು ಅವುಗಳ ಬಗ್ಗೆ ತಾನು ಸೂಕ್ತವೆಂದು ಭಾವಿಸಿದಂಥ ಆದೇಶಗಳನ್ನು ಹೊರಡಿಸಬಹುದು.

**43. ನಿರ್ದೇಶನಗಳನ್ನು ನೀಡುವುದಕ್ಕೆ ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ತಾನು ಅವಶ್ಯಕ ಮತ್ತು ಸಮಯೋಚಿತವೆಂದು ಅಭಿಪ್ರಾಯ ಪಡುವಂಥ ನಿರ್ದೇಶನಗಳನ್ನು ಪ್ರಾಧಿಕಾರಕ್ಕೆ ಕೊಡಬಹುದು ಮತ್ತು ಅಂಥ ನಿರ್ದೇಶನಗಳನ್ನು ಪಾಲಿಸುವುದು ಪ್ರಾಧಿಕಾರದ ಕರ್ತವ್ಯವಾಗಿರತಕ್ಕದ್ದು.

**44. ತೊಂದರೆಗಳ ನಿವಾರಣೆ.–** ಈ ಅಧಿನಿಮಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ, ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಆ ತೊಂದರೆಯ ನಿವಾರಣೆಗಾಗಿ, ತಾನು ಅವಶ್ಯಕ ಮತ್ತು ಸಮಯೋಚಿತವೆಂದು ಅಭಿಪ್ರಾಯಪಡುವಂಥ ಉಪಬಂಧಗಳನ್ನು ಅಧಿಸೂಚನೆಯ ಮೂಲಕ ಮಾಡಬಹುದು.

**45. ನಿಯಮಗಳ ರಚನಾಧಿಕಾರ.–** (1) ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು ಅಥವಾ ಅಧಿಸೂಚನೆಯನ್ನು ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚಿನ ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನಗಳ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮದಲ್ಲಿ ಅಥವಾ ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳೂ ಒಪ್ಪಿದರೆ ಅಥವಾ ಆ ನಿಯಮವನ್ನು ಅಥವಾ ಅಧಿಸೂಚನೆಯನ್ನು ಮಾಡಕೂಡದೆಂದು ಎರಡೂ ಸದನಗಳೂ ಒಪ್ಪಿದರೆ ಆ ನಿಯಮವು ಅಥವಾ ಅಧಿಸೂಚನೆಯು ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಆ ಮಾರ್ಪಾಟನ್ನು ಅಥವಾ ರದ್ದತಿಯನ್ನು ಅಧಿಸೂಚಿಸಿದ

ದಿನಾಂಕದಿಂದ ಪರಿಣಾಮಕಾರಿಯಾಗತಕ್ಕದ್ದು ಅಥವಾ ಯಾವುದೇ ಪರಿಣಾಮ ಹೊಂದಿರತಕ್ಕದ್ದಲ್ಲ; ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಅಥವಾ ಅಧಿಸೂಚನೆಯ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**46. ವಿನಿಯಮಗಳ ರಚನಾಧಿಕಾರ.-** ಪ್ರಾಧಿಕಾರವು, ಈ ಅಧಿನಿಯಮದ ಉಪಬಂಧಗಳಿಗೆ ಮತ್ತು 45ನೇ ಪ್ರಕರಣದ ಮೇರೆಗೆ ರಚಿಸಲಾದ ನಿಯಮಗಳಿಗೆ ಒಳಪಟ್ಟು ಮತ್ತು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕೆ ಅಧಿಸೂಚನೆಯ ಮೂಲಕ ವಿನಿಯಮಗಳನ್ನು ರಚಿಸಬಹುದು.

**47. ನಿರಸನ ಮತ್ತು ಉಳಿಸುವಿಕೆಗಳು.-** (1) ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ಅಧ್ಯಾದೇಶ, 2005ನ್ನು (2005ರ ಕರ್ನಾಟಕ ಅಧ್ಯಾದೇಶ 2) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸಿತಗೊಳಿಸಿದ್ದರೂ, ಸದರಿ ಅಧ್ಯಾದೇಶ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

**ಅನುಸೂಚಿ**

**(2ನೇ ಪ್ರಕರಣದ (ಜಿ) ಖಂಡವನ್ನು ನೋಡಿ)**

**ಕಾಗಿನೆಲೆಯಲ್ಲಿರುವ ಪರಂಪರೆಯ ತಾಣಗಳು ಮತ್ತು ಸ್ಮಾರಕಗಳು**

| | |
|---|---|
| (1) ಬಾಡ | 1. ಕನಕದಾಸರ ಜನ್ಮಸ್ಥಳ<br>2. ಕೆಂಗೇರಿ ಕೆರೆ<br>3. ಕನಕದಾಸರ ಪಂಚಸಮಿತಿ<br>4. ಶ್ರೀ ರಂಗನಾಥ ದೇವರ ಸ್ಥಳ |
| (2) ಕಾಗಿನೆಲೆ | 1. ಆದಿಕೇಶವ ದೇವಾಲಯ<br>2. ಕಾಳಹಸ್ತೇಶ್ವರ<br>3. ಗುರುಪೀಠ<br>4. ಸಂಗಮೇಶ್ವರ ದೇವಾಲಯ<br>5. ಬಯಲು ಬಸವೇಶ್ವರ ದೇವಾಲಯ<br>6. ವೀರಭದ್ರೇಶ್ವರ ದೇವಾಲಯ<br>7. ಸೋಮೇಶ್ವರ ದೇವಾಲಯ<br>8. ಗಚ್ಚಿನ ಮಠ<br>9. ಕನಕದಾಸರ ಐಕ್ಯಸ್ಥಳ |
| (3) ಇಂಗಳಗೊಂದಿ | 1. ಚೆನ್ನಕೇಶವ ದೇವಾಲಯ<br>2. ಕಲ್ಲೇಶ್ವರ ದೇವಾಲಯ ಶಾಸನ ಮತ್ತು ಸತಿಕಲ್ಲು |
| (4) ದಾಸನಕೊಪ್ಪ | 1. ಮಾರುತಿ ದೇವಸ್ಥಾನ |
| (5) ಕುಮ್ಮೂರು | 1. ತಿಮ್ಮಕೇಶವ ದೇವಾಲಯ |
| (6) ಕದರಮಂಡಲಗಿ | 1. ಆಂಜನೇಯ (ಕಾಂತೇಶ) ದೇವಸ್ಥಾನ ಮತ್ತು ಶಾಸನ<br>2. ಕಲ್ಯಾಣಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

| ಭಾಗ – VI | ಬೆಂಗಳೂರು, ಸೋಮವಾರ, ಮಾರ್ಚ್ ೨೩, ೨೦೦೯ (ಚೈತ್ರ ೨, ಶಕ ವರ್ಷ ೧೯೩೦) | ನಂ. ೧೬೯ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಶಿವಮೊಗ್ಗ)611:2007–08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(3) ದಿನಾಂಕ: 24–01–2008ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ23–01–2008 ಮತ್ತು 24–01–2008 ರಂತೆ ಶಿವಮೊಗ್ಗ ನಗರ ಸಭೆಯ 5 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ13–08–2004 ರ ಆದೇಶದಂತೆ ಸಹಾಯಕ ಕಮೀಷನರ್, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು ಸಹಾಯಕ ಕಮೀಷನರ್, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು ದಿನಾಂಕಃ22–02–2008 ರಂದು ನಿಯಮಾನುಸಾರ ನಗರಸಭೆ ಶಿವಮೊಗ್ಗದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | **ಚುನಾವಣೆ ನಡೆಸಿದ ಸ್ಥಾನ** | **ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ** | **ಆಯ್ಕೆಯಾದವರ ಹೆಸರು** |
|---|---|---|---|
| 01 | ನಗರಸಭೆ ಶಿವಮೊಗ್ಗದ ಅಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ಎಂ. ಶಂಕರ್,3ನೇ ಅಡ್ಡರಸ್ತೆ, ರವೀಂದ್ರ ನಗರ, ಶಿವಮೊಗ್ಗ |
| 02 | ನಗರಸಭೆ ಶಿವಮೊಗ್ಗದ ಉಪಾಧ್ಯಕ್ಷ ಸ್ಥಾನ | ಪರಿಶಿಷ್ಟ ಜಾತಿ ಸಾಮಾನ್ಯ | ಶ್ರೀಮತಿ ಲಕ್ಷ್ಮಮ್ಮ ಸಣ್ಣಪ್ಪ, ಶಾಂತಿನಗರ, ಮುಖ್ಯರಸ್ತೆ, ಹೊನ್ನಾಳ್ಳಿ ಮುಖ್ಯರಸ್ತೆ, ಶಿವಮೊಗ್ಗ |

**ಪಂಕಜ ಕುಮಾರ್ ಪಾಂಡೆ**
ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ,

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಭದ್ರಾವತಿ)611:2007–08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಅರ್ 2007(3) ದಿನಾಂಕ: 24–01–2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ 23–01–2008 ಮತ್ತು 24–01–2008 ರಂತೆ ಭದ್ರಾವತಿ ನಗರ ಸಭೆಯ 5 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ 13–08–2004 ರ ಆದೇಶದಂತೆ ಸಹಾಯಕ ಕಮೀಷನರ್, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು.

ಸಹಾಯಕ ಕಮೀಷನರ್, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು ದಿನಾಂಕಃ20–02–2008 ರಂದು ನಿಯಮಾನುಸಾರ ನಗರಸಭೆ ಭದ್ರಾವತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | **ಚುನಾವಣೆ ನಡೆಸಿದ ಸ್ಥಾನ** | **ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ** | **ಆಯ್ಕೆಯಾದವರ ಹೆಸರು** |
|---|---|---|---|
| 01 | ನಗರಸಭೆ ಭದ್ರಾವತಿಯ ಅಧ್ಯಕ್ಷ ಸ್ಥಾನ | ಹಿಂದುಳಿದ ವರ್ಗ–ಬಿ | ಶ್ರೀ ವಿ ಶೇಖ್ ಮಹಬೂಬ್,ಬಿನ್ ನಜೀರ್ ಸಾಬ್,ಸಿಗೇಬಾಗಿ,ಹಾಲಪ್ಪ ಸಾಮಿಲ್, ಸಿಎನ್ ರಸ್ತೆ ಭದ್ರಾವತಿ |

| | | | |
|---|---|---|---|
| 02 | ನಗರಸಭೆ ಭದ್ರಾವತಿಯ ಉಪಾಧ್ಯಕ್ಷ ಸ್ಥಾನ | ಹಿಂದುಳಿದವರ್ಗ–ಬಿ ಮಹಿಳೆ | ಶ್ರೀಮತಿ ಸಾವಿತ್ರಮ್ಮ, ಜಯಲಕ್ಷ್ಮಿ ನಿಲಯ,5 ನೇಕ್ರಾಸ್ ಎನ್ ಎಂಸಿ ಭದ್ರಾವತಿ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಸಾಗರ)611:2007–08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(3) ದಿನಾಂಕ:24–01–2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ23–01–2008 ಮತ್ತು 24–01–2008 ರಂತೆ ಸಾಗರ ನಗರ ಸಭೆಯ 5 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ 13–08–2004 ರ ಆದೇಶದಂತೆ ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು.

ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರು ದಿನಾಂಕಃ15–02–2008 ರಂದು ನಿಯಮಾನುಸಾರ ನಗರಸಭೆ ಸಾಗರ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ನಗರಸಭೆ ಸಾಗರ ಅಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ಮೇಘರಾಜ ,ಟಿ .ಡಿ.,ಸುಭಾಷ್ ನಗರ,ಸಾಗರ |
| **ಕ್ರ.ಸಂ.** | **ಚುನಾವಣೆ ನಡೆಸಿದ ಸ್ಥಾನ** | **ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ** | **ಆಯ್ಕೆಯಾದವರ ಹೆಸರು** |
| 02 | ನಗರಸಭೆ ಸಾಗರ ಉಪಾಧ್ಯಕ್ಷ ಸ್ಥಾನ | ಸಾಮಾನ್ಯ – ಮಹಿಳೆ | ಶ್ರೀಮತಿ ವಂದನಾಶ್ರೀನಿವಾಸ್, ಗಾಂಧಿನಗರ ವೃತ್ತ ಸಾಗರ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಶಿಕಾರಿಪುರ)611:2007–08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(2) ದಿನಾಂಕ: 24–01–2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ 23–01–2008 ಮತ್ತು 24–01–2008 ರಂತೆ ಶಿಕಾರಿಪುರ ಪುರಸಭೆಯ 5 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ 13–08–2004 ರ ಆದೇಶದಂತೆ ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು .

ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರು ದಿನಾಂಕಃ15–02–2008 ರಂದು ನಿಯಮಾನುಸಾರ ಶಿಕಾರಿಪುರ ಪುರಸಭೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ಶಿಕಾರಿಪುರ ಪುರಸಭೆಯ ಅಧ್ಯಕ್ಷ ಸ್ಥಾನ | ಹಿಂದುಳಿದ ವರ್ಗ–ಎ | ಶ್ರೀ ಕೆ.ವೆಂಕಟೇಶ್,ಬಿನ್ ನಾರಾಯಣಪ್ಪ,ಜಯನಗರ,ಶಿಕಾರಿಪುರ |
| 02 | ಶಿಕಾರಿಪುರ ಪುರಸಭೆಯ ಉಪಾಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀಮತಿ ಎನ್.ವೀಣಾ,ಹೆಚ್.ಮಲ್ಲೇಶಪ್ಪ, ಕೋಂ ಮಲ್ಲೇಶಪ್ಪ,ಜಯನಗರ,ಶಿಕಾರಿಪುರ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಶಿರಾಳಕೊಪ್ಪ)611:2007–08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(1) ದಿನಾಂಕ: 24-01-2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ23-01-2008 ಮತ್ತು 24-01-2008 ರಂತೆ ಶಿರಾಳಕೊಪ್ಪ, ಪಟ್ಟಣ ಪಂಚಾಯಿತಿ 5 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ 13-08-2004 ರ ಆದೇಶದಂತೆ ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು .

ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರು ದಿನಾಂಕಃ16-02-2008 ರಂದು ನಿಯಮಾನುಸಾರ ಶಿರಾಳಕೊಪ್ಪ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ಶಿರಾಳಕೊಪ್ಪ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ಗಾಂಧಿ ಸೈಫುಲ್ಲಾ,ಹಳೇ ಪೋಸ್ಟ್ ಕೇರಿ,ಶಿರಾಳಕೊಪ್ಪ |
| 02 | ಶಿರಾಳಕೊಪ್ಪ, ಪಟ್ಟಣ ಪಂಚಾಯಿತಿ ಉಪಾಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ರಟ್ಟೀ ಹಳ್ಳಿ ಲೋಕೇಶ್, ಬಿನ್ ಶಾಂತವೀರಪ್ಪ , ಕುಂಬಾರ ಕೇರಿ,ಶಿರಾಳಕೊಪ್ಪ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಹೊಸನಗರ)611:2007–08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(1) ದಿನಾಂಕ: 24-01-2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ 23-01-2008 ಮತ್ತು 24-01-2008 ರಂತೆ ಹೊಸನಗರ, ಪಟ್ಟಣ ಪಂಚಾಯಿತಿ 5ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ 13-08-2004 ರ ಆದೇಶದಂತೆ ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು .

ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರು ದಿನಾಂಕಃ16-02-2008 ರಂದು ನಿಯಮಾನುಸಾರ ಹೊಸನಗರ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ಹೊಸನಗರ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನ | ಪರಿಶಿಷ್ಠ ಜಾತಿ – ಮಹಿಳೆ | ಶ್ರಿಮತಿ ಆರ್.ಎಂ.ಗುಲಾಬಿ, ಮಾರಿಗುಡ್ಡ ಹೊಸನಗರ |
| 02 | ಹೊಸನಗರ, ಪಟ್ಟಣ ಪಂಚಾಯಿತಿ ಉಪಾಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ಹೆಚ್ ಎನ್ ಶ್ರೀಪತಿರಾವ್ ಅಂಬೇಡ್ಕರ್ ಬೀಧಿ,ಹೊಸನಗರ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ತೀರ್ಥಹಳ್ಳಿ)611:2007-08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(1) ದಿನಾಂಕ: 24-01-2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ 23-01-2008 ಮತ್ತು 24-01-2008 ಹಾಗೂ 19-02-2008 ರಂತೆ ತೀರ್ಥಹಳ್ಳಿ, ಪಟ್ಟಣ ಪಂಚಾಯಿತಿ 5 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ13-08-2004 ರ ಆದೇಶದಂತೆ ಸಹಾಯಕ ಕಮೀಷನರ್, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು .

ಸಹಾಯಕ ಕಮೀಷನರ್, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ರವರು ದಿನಾಂಕಃ07-03-2008 ರಂದು ನಿಯಮಾನುಸಾರ ತೀರ್ಥಹಳ್ಳಿ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರ.ಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿ ಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ತೀರ್ಥಹಳ್ಳಿ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನ | ಹಿಂದುಳಿದವರ್ಗ-ಬಿ ಮಹಿಳೆ | ಶ್ರಿಮತಿ ವಿನೋಧ ಶ್ರೀನಿವಾಸ ಶೆಟ್ಟಿ, ಕೋಂ ಶ್ರೀನಿವಾಸ ಶೆಟ್ಟಿ, ಪ್ರಶಾಂತ ನಿಂಲಯ, 6ನೇ ತಿರುವು, ಸೊಪ್ಪುಗುಡ್ಡೆ ತೀರ್ಥಹಳ್ಳಿ |
| 02 | ತೀರ್ಥಹಳ್ಳಿ, ಪಟ್ಟಣಪಂಚಾಯಿತಿ ಉಪಾಧ್ಯಕ್ಷ ಸ್ಥಾನ | ಪರಿಶಿಷ್ಠ ಜಾತಿ | ಶ್ರೀ ಟಿ.ರಹಮತುಲ್ಲಾ ಅಸಾಧಿ,ಬಿನ್ ಟಿ.ನೂರ್ ಅಹಮ್ಮದ್, ದೊಡ್ಡಮನೆ ಕೇರಿ, ತೀರ್ಥಹಳ್ಳಿ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಸೊರಬ)611:2007-08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(1) ದಿನಾಂಕ: 24-01-2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ 23-01-2008 ಮತ್ತು 24-01-2008 ರಂತೆ ಸೊರಬ,

ಪಟ್ಟಣ ಪಂಚಾಯಿತಿ 5ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ 13-08-2004 ರ ಆದೇಶದಂತೆ ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು .

ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರು ದಿನಾಂಕಃ16-02-2008 ರಂದು ನಿಯಮಾನುಸಾರ ಸೊರಬ, ಪಟ್ಟಣ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ. ಎಂಬ ವರದಿ ಆಧರಿಸಿ ಪ್ರಕಟಿಸಿದೆ.

| ಕ್ರಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ಸೊರಬ,ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನ | ಸಾಮಾನ್ಯ | ಶ್ರೀ ಮಂಚಿ ಸೋಮಪ್ಪ,ಬಿನ್ ಮಂಚಿ ರಾಮಪ್ಪ,ಪಿಎಲ್ ಡಿ ಬ್ಯಾಂಕ್ ರಸ್ತೆ,ಸೊರಬ |
| 02 | ಸೊರಬ,ಪಟ್ಟಣ ಪಂಚಾಯಿತಿ ಉಪಾಧ್ಯಕ್ಷ ಸ್ಥಾನ | ಹಿಂದುಳಿದ ವರ್ಗ-ಎ ಮಹಿಳೆ | ಶ್ರೀಮತಿ ಗೌರಮ್ಮ ಎಸ್.ಭಂಡಾರಿ,ಕೋಂ.ಸಂಜೀವ ಭಂಡಾರಿ,ರಾಘವೇಂದ್ರ ಬಡಾವಣೆ, ಸೊರಬ |

ಜಿಲ್ಲಾಧಿಕಾರಿ,
ಶಿವಮೊಗ್ಗಜಿಲ್ಲೆ, ಶಿವಮೊಗ್ಗ

**ಪ್ರಕಟಣೆ**

**ನಂ : ಶಿಜಿನಕೊ:ಸಿಆರ್(3):(ಜೋಗ-ಕಾರ್ಗಲ್)611:2007-08, ದಿನಾಂಕ : 20ನೇ ಮಾರ್ಚ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 178ಎಂಎಲ್ಆರ್ 2007(1) ದಿನಾಂಕ: 24-01-2008 ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ.ಯು.ಡಿ.ಡಿ.178.ಎಂಎಲ್ಆರ್(ಪಿ) ದಿನಾಂಕಃ 23-01-2008 ಮತ್ತು 24-01-2008 ಹಾಗೂ (ಪತ್ರ ಸಂಖ್ಯೆ ನಅಇ/17/ಎಂಎಲ್ಆರ್.2009) 19-02-2009 ರಂತೆ ಜೋಗ-ಕಾರ್ಗಲ್, ಪಟ್ಟಣ ಪಂಚಾಯಿತಿ 3 ನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ನಿಗದಿ ಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕಃ13-08-2004ರ ಆದೇಶದಂತೆ ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರನ್ನು ಚುನಾವಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು .

ಸಹಾಯಕ ಕಮೀಷನರ್, ಸಾಗರ ಉಪವಿಭಾಗ, ಸಾಗರ ರವರು ದಿನಾಂಕಃ09-03-2009 ರಂದು ನಿಯಮಾನುಸಾರ ಜೋಗ-ಕಾರ್ಗಲ್, ಪಟ್ಟಣ ಪಂಚಾಯಿತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ನಡೆಸಿ ಈ ಕೆಳಗಿನಂತೆ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ ಎಂದು ವರದಿ ನೀಡಿರುತ್ತಾರೆ.

| ಕ್ರಸಂ. | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗದಿಗೊಳಿಸಿದ ಮೀಸಲಾತಿ | ಆಯ್ಕೆಯಾದವರ ಹೆಸರು |
|---|---|---|---|
| 01 | ಜೋಗ-ಕಾರ್ಗಲ್ ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನ | ಪರಿಶಿಷ್ಟ ಜಾತಿ | ಶ್ರೀಮತಿ ಬಿ.ಸರೋಜ ಕೋಂ ಕೆಂಪರಾಜು,ಜೋಗಫಾಲ್ಸ್, |
| 02 | ಜೋಗ-ಕಾರ್ಗಲ್, ಪಟ್ಟಣ ಪಂಚಾಯಿತಿ ಉಪಾಧ್ಯಕ್ಷ ಸ್ಥಾನ | ಸಾಮಾನ್ಯ-ಮಹಿಳೆ | ಶ್ರೀಮತಿ ಎಲಿಜಾ ಮ್ಯಾಥ್ಯೂ ಕೋಂ ಯು.ಪಿ . ಮ್ಯಾಥ್ಯೂ ಕಾರ್ಗಲ್ |

ಕರ್ನಾಟಕ ಮುನಿಸಿಪಾಲ್ಟೀಸ್ (ಅಧ್ಯಕ್ಷ ಮತು ಉಪಾಧ್ಯಕ್ಷ) ಚನಾವಣಾ ನಿಯಮ 12 ರಂತೆ ಘೋಷಣಾಧಿಕಾರಿಯಾದ ನಾನು ಶ್ರಿಮತಿ ಬಿ.ಸರೋಜ ಕೋಂ ಕೆಂಪರಾಜು, ಜೋಗ-ಕಾರ್ಗಲ್, ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನಕ್ಕೆ ಮತ್ತು ಶ್ರೀಮತಿ ಎಲಿಜಾ ಮ್ಯಾಥ್ಯೂ ಕೋಂ ಯು.ಪಿ . ಮ್ಯಾಥ್ಯೂ, ಜೋಗ-ಕಾರ್ಗಲ್ ,ಪಟ್ಟಣ ಪಂಚಾಯಿತಿ ಉಪಾಧ್ಯಕ್ಷ ಸ್ಥಾನಕ್ಕೆ ಆಯ್ಕೆ ಯಾಗಿರುತ್ತಾರೆ ಎಂದು ಘೋಷಿಸಿದ್ದೇನೆ.

**ಪಂಕಜ ಕುಮಾರ್ ಪಾಂಡೆ**
ಜಿಲ್ಲಾಧಿಕಾರಿ, ಶಿವಮೊಗ್ಗಜಿಲ್ಲೆ,

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಮಂಗಳವಾರ, ಮಾರ್ಚ್ ೨೪, ೨೦೦೯ (ಚೈತ್ರ ೩, ಶಕ ವರ್ಷ ೧೯೩೦) | ನಂ. ೧೨೦ |
|---|---|---|

**Public Works, Ports and Inland Water Transport Secretariat**

**NOTIFICATION**

**No. PWD 180 SAG 2008, Bangalore, Dated: $23^{rd}$ March, 2009**

Whereas the Government of Karnataka introduced the policy of reservation in promotions in the State in favour of persons belonging to Scheduled Castes (SCs) and Scheduled Tribes (STs) with effect from $27^{th}$ April 1978 as per the Government Order No.DPAR 29 SBC 77 dated 27th April 1978 and as per the instructions contained in paragraph 7 of the said Government Order dated $27^{th}$ April 1978, the inter-se seniority amongst persons promoted in accordance with the said order on any occasion of promotion has to be determined in the manner provided in rule 4 or 4A, as the case may be, of the Karnataka Government Servants (Seniority) Rules, 1957;

Whereas the Constitution Bench of the Hon'ble Supreme Court in its judgement dated **$16^{th}$ November, 1992** in the case of **Indra Sawhney v. Union of India** held that reservation of appointments or posts under Article 16 (4) of the Constitution is confined to initial appointment and cannot extend to reservation in the matter of promotion and further directed that wherever reservations are already provided in the matter of promotion, such reservation shall continue in operation for a period of five years from the date of the said judgement;

Whereas in pursuance of the directions of the Hon'ble Supreme Court in **M.G. Badappanavar** case in the matter of determination of inter-se seniority between persons belonging to the reserved categories and the general category on the basis of the ratio laid by it in Ajit Singh (II), Government in Public Works Department had published the final seniority list of Assistant Executive Engineers (Division-1) as on 01-05-2001 vide Notification No.LoE 240 SeSaE 2001 dated 20-08-2001;

Whereas in order to protect the interests of the persons belonging to Scheduled Cases and Scheduled Tribes in the matter of reservation in promotion in the wake of the judgement dated $16^{th}$ November, 1992 of the Hon'ble Supreme Court in the case of **Indra Sawhney v. Union of India** and the judgements of the Hon'ble Supreme Court in the case of **Union of India v. Virpal Singh Chauhan and Ajit Singh Januja (No.1) v. State of Punjab etc.,** the Parliament enacted $77^{th,}$ $81^{st}$, $82^{nd}$ and $85^{th}$ Constitution Amendment Acts enabling State Governments to provide, among other things, for reservation in promotion with consequential seniority to any class or classes of posts in the services under the State in favour of persons belonging to Scheduled Cases and Scheduled Tribes (SCs and STs) with retrospective effect from $17^{th}$ June 1995;

Whereas pursuant to the $85^{th}$ Constitution Amendment Act, the Government of Karnataka enacted the Karnataka Determination of Seniority of the Government Servants Promoted on the basis of Reservation (to the posts in the Civil Services of the State) Act, 2002 (Karnataka Act No.10 of 2002) providing for consequential seniority to Government servants belonging to SCs and STs promoted on the basis of policy of reservation from the date of their promotion to the respective cadres and also providing for protection of consequential seniority already accorded to the Government servants belonging to SCs and STs promoted in accordance with the policy of reservation with effect from $27^{th}$ April 1978;

Whereas the Hon'ble Supreme Court in its interim order dated 08-04-2002 in Writ Petition (Civil) No.61 and 62 of 2002 and other connected cases filed by Sri M. Nagaraj and others questioning the constitutional validity of the $85^{th}$ Constitution Amendment Act and the Karnataka Act No.10/2002, passed the following orders:-

*"A question of constitutional law arises, It is, therefore, appropriate that these petitions should be heard by a Constitution Bench.*

*In so far as interim relief is concerned, the respondents shall not revert the petitioners nor affect their standing in the seniority list and promotion, pay etc., At the same time it shall be open to the respondents to promote those who are benefited by the impugned amendment but so that it does not affect the petitioners in any manner and subject to the result of the writ petitions.";*

Whereas in pursuance of the above directions of the Hon'ble Supreme Court, Public Works Department published the revised provisional seniority list of Assistant Executive Engineers (Division-1) in Notification No. PWD 132 SAG 2002, dated 11-04-2002 duly protecting the existing seniority of the writ petitioners as per Badappanavar case by indicating '$' sign against their names in the said seniority list and the said list was being treated as 'working list' for the purpose giving promotions to the higher cadre;

Whereas pursuant to writ petitions filed by some of the general category Engineers who are seniors to writ petitioners in WP (Civil) No.61 & 62 of 2002 seeking protection of their seniority vide W.P. Nos.255/2002, 294/2002, 296/2002, 299/2002, 315/2002, 316/2002 etc., the Hon'ble Supreme Court passed interim orders to protect their seniority also;

Whereas consequent upon an IA filed before the Hon'ble Supreme Court by the State Government seeking clarification / modification of the aforesaid ad-interim orders in view of the fact that it was not possible, due non-availability vacancies, to promote all the senior general category Engineers whose seniority was thus protected, the Hon'ble Supreme Court, after clubbing this IA along with the other related Writ Petitions, passed the following interim order on **11-11-2002**:-

> *"These writ petitions involve the constitutionality of Article 16(4A). The Court, by an interim order, has directed not to revert any of the petitioners from their existing placement nor affect their standing in the seniority list, but at the same time the provisions of Article 16(4A) can be implemented and by virtue of that provision if some of the reserve category candidates are entitled to promotion, they shall be promoted. The obvious idea being the court should not stay the operation of a constitutional provision. The State finds difficulty in implementing the order on the ground that there does not exist sufficient vacancy of posts in a particular cadre to give effect to the provisions contained in Article 16(4A). This being an interim arrangement, we direct that they should apply to the number of vacancies available in a cadre to give effect to the promotional policy and undoubtedly, such a promotion can be granted only when the State makes a provision for reservation in terms of Article 16(4A).* ***In view of the fact that the implementation of interim order may cause a lot of chaos in the service, it is mete and proper that the matter should be finally heard and disposed of and we, therefore, direct that this batch of writ petitions be listed before a Constitution Bench in the month of February, 2003.";***

Whereas the Constitution Bench of the Hon'ble Supreme Court in its final judgement dated **19-10-2006** in W.P. (Civil) No.61 of 2002 and other connected cases, while upholding the constitutional validity of the 77$^{th}$, 81$^{st}$ 82$^{nd}$ and 85$^{th}$ Constitution Amendment Acts, has made the following observations:-

> *"The impugned constitutional amendment by which Articles 6(4A) and 16(4B) have been inserted flow from Article 16(4). They do not alter the structure of Article 16(4). They retain the controlling factors or the compelling reasons, namely, backwardness and inadequacy of representation which enables the states to provide for reservation keeping in mind the overall efficiency of the State administration under Article 335. These impugned amendments are confined only to SCs and STs. They do not obliterate any of the constitutional requirements namely, ceiling-limit of 50% (quantitative limitation), the concept of creamy layer (qualitative exclusion), the sub-classification between OBC on one hand and SCs and STs on the other hand as held in Indra Sawhney, the concept of post-based roster with in-built concept of replacement as held in R.K.Sabharwal.*
>
> *We reiterate that the ceiling-limit of 50%, the concept of creamy layer and the compelling reasons, namely, backwardness, inadequacy of representation and overall administrative efficiency are all constitutional requirements without which the structure of equality of opportunity in Article 16 would collapse.*
>
> *However, in this case, as stated, the main issue concerns the "extent of reservation". In this regard the concerned State will have to show in each case the existence of the compelling reasons, namely, backwardness, inadequacy of representation and overall administrative efficiency before making provision for reservation. As stated above, the impugned provision is an enabling provision. The State is not bound to make reservation for SC/ST in matter of promotion. However, if they wish to exercise their discretion and make such provision, the State has to collect quantifiable data showing backwardness of the class and inadequacy of representation of that class in public employment in addition to compliance of Article 335. It is made clear that even if the State has compelling reasons, as stated above, the State will have to see that its reservation provision does not lead to excessiveness so as to breach the ceiling-limit of 50% or obliterate the creamy layer or extend the reservation indefinitely.*
>
> *Subject to above, we uphold the constitutional validity of the Constitutional (Seventy-Seventh Amendment) Act, 1995, the Constitution (Eighty-first Amendment) Act, 2000, the Constitutional (Eighty-second Amendment) Act, 2000 and the Constitution (Eighty-fifth Amendment) Act, 2001.*
>
> *We have not examined the validity of individual enactments of appropriate States and that question will be gone into in individual writ petition by the appropriate bench in accordance with law laid down by us in the present case.";*

